

# ಕರ್ನಾಟಕದ ಚಿತ್ರಕಲೆಯಲ್ಲಿ ದಶಾವತಾರದ ಕಲ್ಪನೆ
## ಒಂದು ಅಧ್ಯಯನ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ)

ಸಂಶೋಧಕರು

ರೇವಣಪ್ಪ ಯ. ಚಿಂತಾಮಣಿ

ಮಾರ್ಗದರ್ಶಕರು

ಡಾ. ಎಸ್.ಸಿ.ಪಾಟೀಲ

ಮುಖ್ಯಸ್ಥರು ಮತ್ತು ಪ್ರಾಧ್ಯಾಪಕರು

ದೃಶ್ಯಕಲಾ ವಿಭಾಗ



ಲಲಿತಕಲಾ ನಿಕಾಯ

ದೃಶ್ಯಕಲಾ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೯-೧೦



## ಮಾರ್ಗದರ್ಶಕರ ದೃಢೀಕರಣ ಪತ್ರ

**ಕರ್ನಾಟಕದ ಚಿತ್ರಕಲೆಯಲ್ಲಿ ದಶಾವತಾರದ ಕಲ್ಪನೆ : ಒಂದು ಅಧ್ಯಯನ** ಎಂಬ ಈ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಎಂಫಿಲ್** ಪದವಿಗಾಗಿ **ರೇವಣಪ್ಪ ಯ ಚಿಂತಾಮಣಿ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಎಸ್.ಸಿ.ಪಾಟೀಲ
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ: 15-9-2010

## ಸಂಶೋಧಕರ ಪ್ರಮಾಣ ಪತ್ರ

**ಕರ್ನಾಟಕದ ಚಿತ್ರಕಲೆಯಲ್ಲಿ ದಶಾವತಾರದ ಕಲ್ಪನೆ : ಒಂದು ಅಧ್ಯಯನ** ಎಂಬ ಈ ಪ್ರಬಂಧವನ್ನು **ಡಾ. ಎಸ್.ಸಿ.ಪಾಟೀಲ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, **ಎಂಫಿಲ್** ಪದವಿಗಾಗಿ ಲಲಿತಕಲೆಗಳ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ರೇವಣಪ್ಪ ಯ. ಚಿಂತಾಮಣಿ
ಸಂಶೋಧಕರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ: 15/09/10

# ಪರಿವಿಡಿ

## ಅಧ್ಯಾಯ – ೧
## ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ ಮತ್ತು ವ್ಯಾಪ್ತಿ

ಕರ್ನಾಟಕದಲ್ಲಿ ಆದಿಕಾಲದಿಂದಲೂ ಮಾನವನು ಅನೇಕ ಸಂಶೋಧನಾತ್ಮಕ ಆವಿಷ್ಕಾರಗಳನ್ನು ಮಾಡುತ್ತ ಬಂದಿದ್ದಾರೆ. ಜೊತೆಗೆ ಭೌತಿಕ ಮತ್ತು ಬೌದ್ಧಿಕ ಜಗತ್ತಿನಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಾನೆ. ಇಂತಹ ಸಂದರ್ಭದಲ್ಲಿ ತನ್ನ ಜೀವನದಲ್ಲಿ ಕಂಡುಕೊಂಡ ದುಃಖ ದುಮ್ಮಾನ ಹಾಗೂ ಸುಖ ಸಂತೋಷಗಳನ್ನು ಅನುಭವಿಸಿ ಅವುಗಳನ್ನು ತನ್ನ ವೈಯಕ್ತಿಕ ಸಂತೋಷಕ್ಕಾಗಿ ತಮ್ಮ ಸಮೂಹದ ಜನರಿಗೆ ತಿಳಿಸಲು ತನ್ನದೇ ಆದ ಕಲಾ ಮಾಧ್ಯಮಗಳಿಗೆ ಒಳಗಾಗುತ್ತಾನೆ. "ಕಲೆ" ಮಾನವನ ದೈಹಿಕ ಇಲ್ಲವೆ ಬೌದ್ಧಿಕ ಚಟುವಟಿಕೆ ಎಂದು ಸಾಮಾನ್ಯವಾಗಿ ಗುರುತಿಸಬಹುದಾಗಿದೆ.

ಭಾರತೀಯರಲ್ಲಿ ಬೌದ್ಧ, ಜೈನ, ವೀರಶೈವ, ವೈಷ್ಣವ, ಮುಸ್ಲಿಂ ಧರ್ಮಗಳನ್ನು ಅನುಸರಿಸಲು ಸಾಂಪ್ರದಾಯಿಕ ದೃಶ್ಯಕಲೆಗಳು ನಿರ್ಮಾಣಗೊಂಡಿವೆ ಎಂಬುದನ್ನು ಕಲಾ ಇತಿಹಾಸದಿಂದ ತಿಳಿದುಕೊಳ್ಳಬಹುದಾಗಿದೆ. ಕರ್ನಾಟಕವು ಇದಕ್ಕೆ ಹೊರತಾಗಿಲ್ಲ. ಕರ್ನಾಟಕದಲ್ಲಿ ಅನೇಕ ಧರ್ಮಗಳಂತೆ ವೈಷ್ಣವ ಧರ್ಮದ ಚಿತ್ರ, ಶಿಲ್ಪಕಲೆ, ಇಲ್ಲಿ ಸೃಷ್ಟಿಸಲಾಗಿದೆ. ದಶಾವತಾರಗಳಲ್ಲಿ 'ಬುದ್ಧ' ಬರುವುದು. ಒಂದು ಪ್ರಭೇಧವಾಗಿ, ಬಲರಾಮ ಒಂದು ಅವತಾರವಾಗಿ ಪರಿಗಣಿಸುವವರಲ್ಲಿ ಬುದ್ಧ ಇರುವುದಿಲ್ಲ. ಶ್ರೀ ವೈಷ್ಣವರ ಪ್ರಕಾರ ಬಲರಾಮ ಎಂಟನೇ ಅವತಾರ. ಕೃಷ್ಣ (ಒಂಬತ್ತು) ಮಾಧ್ವ ಲೆಕ್ಕಾಚಾರದಂತೆ ಕೃಷ್ಣ(ಎಂಟು) ಬುದ್ಧ (ಒಂಬತ್ತು) ಬಲರಾಮ ಶೇಷನ ಅವತಾರವೆಂದು ಇವರು ನಂಬುವುದರಿಂದ ಆತ (ವಿಷ್ಣುವಿನ) ಅವತಾರವಲ್ಲ ಎಂದು ಹೇಳುವ ವಸುಂಧರ ಅವರು ೧೫೫೫ಳರ ವೇಳೆಯಲ್ಲಿ ವಿಜಯನಗರದಲ್ಲಿ ಶ್ರೀ ವೈಷ್ಣವರ ಪ್ರಭಾವವಿದ್ದರೂ ಮಾಧ್ವದಾಸರ

ಪದಗಳಿಂದ ಸ್ಫೂರ್ತಿಗೊಂಡು ವಿಠ್ಠಲ ಮಂಟಪದ ಕಂಬಗಳಲ್ಲಿ ಬೌದ್ಧಾವತಾರ ಕೆತ್ತಿದ್ದಾರೆ. ದಾಸರ ಪದಗಳಲ್ಲಿ ಸಹ ಬಲರಾಮನಿಗೆ ಸ್ಥಾನವಿಲ್ಲ ಎಂದು ಹೇಳುತ್ತಾರೆ.

ಹರಿವಂಶದಲ್ಲಿ ತ್ರಿಪುರ ಸಂಹಾರದ ಪ್ರಸಂಗ ಒಂದು ವಿಷ್ಣುವಿನ ನೆರವನ್ನು ಶಿವ ಪಡೆಯುವನಾದರೂ ನಗ್ನತೆಯ ಪ್ರಸಂಗ ಬರುವುದಿಲ್ಲ. ಶಾಂತಲಿಂಗ ದೇಶಿಕನು(೧೬೭೨) ತ್ರಿಪುರ ಸಂಹಾರ ಕುರಿತು ಹೇಳುವಾಗ ವಿಷ್ಣುವಿನ ಕುಹಕದಿಂದ ಲಿಂಗಧಾರಣೆ ಬಿಟ್ಟರೆಂದೂ ಹೇಳುವನೇ ವಿನಾ ವಿಷ್ಣು ಬೆತ್ತಲೆ ನಿಲ್ಲುವುದಿಲ್ಲ. ಈ ಪ್ರಸಂಗ ಬರುವುದು. ಜನಪದ ಕಥೆಯಲ್ಲಿ, ಶಿವನಿಗೆ ತ್ರಿಪುರರನ್ನು ಸಂಹರಿಸುವುದು. ಕಷ್ಟವಾಗಿ, ಅಲ್ಲಿಯ ಹೆಂಗಳೆಯರ ಪತಿವ್ರತ್ಯ ಕೆಡಿಸಿದಾಗ ಸಾಧ್ಯವೆಂದು ತಿಳಿದು ಕೃಷ್ಣ ಬುಡಬುಡಿಕೆಯವನ ವೇಶ ಧರಿಸಿ ತ್ರಿಪುರನ ಏಳು ಜನ ಹೆಣ್ಣು ಮಕ್ಕಳಿಗೆ ಮಧ್ಯರಾತ್ರಿ–ಕೆರೆಯಲ್ಲಿ ಸ್ನಾನ ಮಾಡಿದಾಗ ಅರಳಿ ಮರವನ್ನು ಬೆತ್ತಲೆಯಾಗಿ ತಬ್ಬಬೇಕು ಎಂದು ಹೇಳಿ ಅವರು ಹಾಗೆ ಮಾಡಿದಾಗ ಮರವೇ ಕೃಷ್ಣ ಆಗಿ ಹೆಂಗಳೆಯರ ಪಾತಿವ್ರತ್ಯ ಹೋಗಿ ಶಿವನಿಗೆ ಜಯವಾಗುತ್ತದೆ. ಇನ್ನೊಂದು ಕಥೆಯಂತೆ ಬುಡಬುಡಿಕೆಯವ ಶಿವ, ಮರವಾಗಿ ನಿಂತವನು ವಿಷ್ಣು. ಈ ಕಥೆಯನ್ನು ಕಳೆದ ಶತಮಾನದ ಅಂತ್ಯದಲ್ಲಿದ್ದ ತಿಪ್ಪೋಜಿ ಎಂಬ ಕಲಾಕಾರ ಶಿವಮೊಗ್ಗೆಯಲ್ಲಿ ವಿಷ್ಣುವಿನ ಪ್ರಭಾವಳಿಯಲ್ಲಿ ಚಿತ್ರಿಸಿದ್ದಾನೆ. ಅಲ್ಲಿ ಮರದ ಸುತ್ತ ನಗ್ನ ಸ್ತ್ರೀಯರಿರುವುದು. ಹಾಗೂ ನಗ್ನವಾಗಿ ನಿಂತಿರುವ ಪುರುಷರನೊಬ್ಬನನ್ನು ಚಿತ್ರಿಸಿದೆ. ಪುರುಷ ಸನ್ಯಾಸಿ ನಗ್ನನಾಗಿರುವುದು ಜೈನರಲ್ಲಿ ದಶಾವತಾರ ಕುರಿತು ಸಾಹಿತ್ಯ ಶಾಸನ ಶ್ಲೋಕ ಇತ್ಯಾದಿಗಳಲ್ಲಿ 'ಬೆತ್ತಲೆ ನಿಂತಿಹ' ಬುದ್ಧ ಎಂದು ಹೇಳದೇ ಹೋಗಿದ್ದರೆ ಚಿತ್ರ–ಶಿಲ್ಪಗಳಲ್ಲಿ ದಶಾವತಾರಕ್ಕೆ ಸಂಬಂಧಿಸಿದಂತೆ ಇರುವ ನಗ್ನ ಪುರುಷಮೂರ್ತಿಯನ್ನು 'ಜೈನ'ರ ಯಾವುದೋ ತೀರ್ಥಂಕರ ಎಂದೇ ಭ್ರಮಿಸಬಹುದಿತ್ತು. ಹಲವಾರು ಸಾಮ್ಯಗಳು ಜೈನ ಬೌದ್ಧದಲ್ಲಿದ್ದು ಇವುಗಳಿಂದಾಗಿ 'ಜೈನ ಬೌದ್ಧರಿಗೆ ವ್ಯತ್ಯಾಸ ಮಾಡಿದ ಗೊಂದಲ ಅಲ್ಲಲ್ಲಿದೆ. ಎಂಬ ಅಭಿಪ್ರಾಯವನ್ನು ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ತಾಳಿರುವರಲ್ಲದೆ. ಮೆಕೆಂಝುರಿಯ (೧೮೦೭) ಜೈನ ಧರ್ಮವನ್ನು ಕುರಿತಾದ ಬರಹಗಳು ಆಗಿನ ವಿದ್ವಾಂಸರ ಗಮನವನ್ನು ಸೆಳೆದವೆಂದೂ, ಬೌದ್ಧ ಮತ್ತು ಜೈನ ಧರ್ಮಗಳು ಬೇರೆ ಎಂಬ ಸ್ಪಷ್ಟ ಕಲ್ಪನೆಯು ಆ ಹಿಂದಿನವರಿಗೆ ಇರಲಿಲ್ಲವೆಂದೂ ಶ್ರೀನಿವಾಸ ಹಾವನೂರು ಅವರು ಜೈನರಲ್ಲಿ ದಶಾವತಾರ ಚಿತ್ರಗಳ ಕುರಿತು ತಿಳಿಸುತ್ತಾರೆ.

"ಕರ್ನಾಟಕದ ಚಿತ್ರಕಲೆಯಲ್ಲಿ ದಶಾವತಾರದ ಕಲ್ಪನೆಯ ಚಿತ್ರಗಳನ್ನು ಕುರಿತಂತೆ ಹಲವಾರು ವಿದ್ವಾಂಸರು ಈಗಾಗಲೇ ಅಭ್ಯಾಸ ಮಾಡಿದ್ದಾರೆ. ಮತ್ತು ಇವುಗಳ ರಚನಾ ಕಾಲದ ಬಗ್ಗೆ ವಿಭಿನ್ನವಾದ ನಿಲುವುಗಳನ್ನು ವ್ಯಕ್ತಪಟಿಸಿದ್ದಾರೆ. ಅಲ್ಲದೇ ಇವುಗಳಲ್ಲಿ ರಚಿತವಾಗಿರುವ ಹಲವಾರು ವಿಷಯದ ವಸ್ತುಗಳನ್ನು ವಿಭಿನ್ನವಾಗಿ ತಮ್ಮದೇ ಆದ ದೃಷ್ಟಿಕೋನದಲ್ಲಿ ಗುರುತಿಸಿದ್ದಾರೆ. ಚಿತ್ರಕಲಾ ಇತಿಹಾಸದ ದೃಷ್ಟಿಯಿಂದ ನಾವು ಈ ಚಿತ್ರಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈ ಚಿತ್ರಗಳ ಬಗ್ಗೆ

ಇದುವರೆಗೂ ಆಗಿರುವ ಅಧ್ಯಯನಗಳು ಅಪೂರ್ಣವೆನಿಸುತ್ತವೆ. ದಶಾವತಾರದ ಚಿತ್ರಗಳು ಮಹಾರಂಗ ಮಂಟಪದಲ್ಲಿನ ಚಿತ್ರಗಳ ಬೆಳವಣಿಗೆ ಹೊಂದಿರಬಹುದಾದ ರೀತಿ, ಚಿತ್ರಗಳ ಶೈಲಿ ವರ್ಣ ವಿನ್ಯಾಸ, ಸಂಯೋಜನ ಆಕೃತಿಗಳು ಹಾಗೂ ಸ್ಥಳದ ಬಳಕೆ ಮತ್ತು ಇವುಗಳ ರಚನಾ ಕಾಲವನ್ನು ಒಂದೆಡೆ ಗಮನಿಸಿರುವುದು ಈ ಚಿತ್ರಗಳ ಕಾಲದಲ್ಲಿದ್ದ ಸಮಕಾಲಿನ ಚಿತ್ರ ಶೈಲಿಗಳೊಂದಿಗೆ ಇವುಗಳಿಗಿದ್ದರಬಹುದಾದ ಸಂಬಂಧ-ಪ್ರಭಾವ ಅಥವಾ ಕೊಡುಕೊಳ್ಳುವಿಕೆಯ ಕುರಿತು ವಿಮರ್ಶಾತ್ಮಕವಾಗಿ ನೋಡುವ ಪ್ರಯತ್ನವು ಅವಶ್ಯಕವಾಗಿ ಆಗಬೇಕಾಗಿದೆ. ಇದರಿಂದ ಪ್ರಸ್ತುತ ಚಿತ್ರಗಳ ಬಗ್ಗೆ ಒಂದು ಪೂರ್ಣ ಚಿತ್ರ ದೊರೆತದಂತಾಗುತ್ತದೆ.

ವಿಷ್ಣುವಿನ ದಶಾವತಾರಕ್ಕೆ ಸಂಬಂಧಿಸಿದಂತೆ ದೃಶ್ಯಕಲೆಗಳಲ್ಲಿ ಅನೇಕ ಚಿತ್ರ, ಶಿಲ್ಪ ಕಲೆಗಳು ರಚನೆಯಾಗಿವೆ. ಪ್ರಾಚೀನ ಗ್ರಂಥಗಳಲ್ಲಿ ಇಂತಹ ಚಿತ್ರ, ಶಿಲ್ಪಕಲೆ ಬೆಳವಣಿಗೆಗೆ ಅನೇಕ ರೀತಿಯ ಧರ್ಮಾಶ್ರಯ, ರಾಜಾಶ್ರಯಗಳು ಪೋಷಣೆಗೆ ಸಹಾಯಕವಾಗಿ ನಿಂತು ಇವುಗಳನ್ನು ಬೆಳೆಸಿದ್ದಾರೆ. ಇವುಗಳಲ್ಲೂ ದೇವಾಲಯದಲ್ಲಿ ಅನೇಕ ಹಸ್ತಪ್ರತಿ, ಭಿತ್ತಿಚಿತ್ರ, ಶಿಲ್ಪಕಲೆಗಳು ಬೆಳೆದುಬಂದಿವೆ. ಇವು ಕರ್ನಾಟಕದ ಧರ್ಮ, ಸಾಂಸ್ಕೃತಿಕ ನೆಲೆಗೆ, ಚಾರಿತ್ರಿಕವಾಗಿ ಬೆಳಕು ಚೆಲ್ಲುತ್ತವೆ. ಇಂತಹ ಕಲೆಗಳ ಸೃಷ್ಠಿ ಇಂದು ಕಲಾ ಇತಿಹಾಸವನ್ನು ಕಟ್ಟಕೊಡುವುದರಿಂದ ದೃಶ್ಯಕಲೆಗಳ ಸಂಶೋಧನೆಯ ಅಗತ್ಯ ತುಂಬಾ ಇದೆ. ದೃಶ್ಯಕಲೆಗಳು ಹೊಸ ಪರಂಪರೆಗೆ ಒಂದು ಆಸ್ತಿಯಾಗಿ ಉಳಿದು ಬಂದಿದ್ದು ಮುಂದೆ ಅದನ್ನು ಬೆಳಸಿಕೊಂಡು ಹೋಗಲು ಈ ಅಧ್ಯಯನ ಉಪಯುಕ್ತವಾಗಿದೆ ಎಂದು ಹೇಳಬಹುದು. ಈ ದಿಸೆಯಲ್ಲಿ ಚಿತ್ರಕಲೆಯ ಮೂಲಕ ಮಾನವ ಇತರ ಮೂಲ ಸಾಮಗ್ರಿಗಳಿಗಿಂತ ಹೇಗೆ ವಿಭಿನ್ನವಾದ ಸಂಗತಿಗಳು ಇಲ್ಲಿ ಅಡಕವಾಗಿವೆ ಎಂದು ತಿಳಿಯಲು ಈ ಅಧ್ಯಯನ ಸಹಕಾರಿಯಗಿದೆ. ಈ ಹಿನ್ನೆಲೆಯಲ್ಲಿ ಒಂದು ಪ್ರಾಮಾಣಿಕ ಪ್ರಯತ್ನವನ್ನೂ ಪ್ರಸ್ತುತ ಅಧ್ಯಯನದ ಮೂಲಕ ಮಾಡಲಾಗುತ್ತಿದೆ.

**ಚಿತ್ರಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳು.**

**ಪಿಹೆಚ್.ಡಿ. ಮಹಾಪ್ರಬಂಧಗಳು.**

೧೯೮೦ರ ದಶಕದಿಂದ ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಮೊದಲ ಬಾರಿಗೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆ ಕುರಿತು ಸಂಶೋಧನಾತ್ಮಕ ಅಧ್ಯಯನ ಪ್ರಾರಂಭಗೊಂಡಿರುವುದು ಕಂಡುಬರುತ್ತದೆ. ಡಾ. ಎಸ್.ಸಿ.ಪಾಟೀಲರು ೧೯೮೩ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ ಮಂಡಿಸಿದ ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ : ಒಂದು ಅಧ್ಯಯನ ಎಂಬ ಸಂಶೋಧನ ಕಿರುಪ್ರಬಂಧವು ಈ ಕ್ಷೇತ್ರದ ಪ್ರಥಮ ಅಧ್ಯಯನದ ಕಾರ್ಯವೆಂದು ದಾಖಲಾಗಿದೆ. ೧೯೮೭ರಲ್ಲಿ ಡಾ.ಬಿ.ಕೆ. ಹಿರೇಮಠರವರು ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ

ಎಂಬ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಹಸ್ತಪ್ರತಿ ಚಿತ್ರಕಲೆ ಕುರಿತಂತೆ ಕೆಲವು ಅಧ್ಯಾಯಗಳನ್ನು ಮೀಸಲಾಗಿಟ್ಟು ಅಧ್ಯಯನ ಮಾಡಿದ್ದಾರೆ. ಇದರ ನಂತರ ೧೯೯೧ರಲ್ಲಿ ಕರ್ನಾಟಕದಲ್ಲಿ ಚಿತ್ರಕಲೆಯನ್ನೇ ಸಂಶೋಧನೆಯ ಮುಖ್ಯ ವಿಷಯವನ್ನಾಗಿಟ್ಟುಕೊಂಡು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಮಂಡಿಸಿದ ಪಿಎಚ್.ಡಿ. ಮಹಾಪ್ರಬಂಧ ಕರ್ನಾಟಕದ ಜನಪದ ಚಿತ್ರಕಲೆ. ಈ ಮಹಾಪ್ರಬಂಧವನ್ನು ಡಾ. ಎಸ್.ಸಿ.ಪಾಟೀಲರು ಸಿದ್ಧಪಡಿಸಿದ್ದು ದೃಶ್ಯಕಲಾ ಕ್ಷೇತ್ರದ ಮೊದಲ ಅಧ್ಯಯನ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ನಂತರದ ದಿನಗಳಲ್ಲಿ ೧೯೯೫ರಲ್ಲಿ ಡಾ. ಅ.ಲ.ನರಸಿಂಹನ್ ಅವರ ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ೧೯೯೭ರಲ್ಲಿ ಡಾ. ಸಂಪದಾ ಭಟ್ ಅವರ ಹಿಂದೂಸ್ತಾನಿ ಸಂಗೀತ ಹಾಗೂ ರಾಗಮಾಲ ಚಿತ್ರಗಳು, ಡಾ. ಪುಷ್ಪಾ ದ್ರಾವಿಡ ಅವರ ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ ಜೀವನ ಮತ್ತು ಕಲಾಕೃತಿಗಳು. ೨೦೦೧ರಲ್ಲಿ ಡಾ. ಯಾದಪ್ಪ ಪರದೇಶಿ ಅವರ ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ ಒಂದು ಅಧ್ಯಯನ, ಡಾ. ಗಿರೀಶ ಕುಮಾರ ಅವರ ಬುಡಕಟ್ಟು ಚಿತ್ರಕಲೆ, ಡಾ. ಲಕ್ಷ್ಮೀದೇವಿ ಗವಾಯಿ ಅವರ ಕಲಾವಿದ ಎಂ.ಎ.ಚೆಟ್ಟಿಯವರ ಜೀವನ ಕಲಾಕೃತಿಗಳು – ಒಂದು ಅಧ್ಯಯನ, ಶರಣಪ್ಪ ಕೋಲ್ಕಾರ ಅವರ ಕೊಪ್ಪಳ-ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ, ಡಾ.ಸೌಮ್ಯ ಅವರ ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರೆನ್ಸ್ ಟು ಕಾಂಟೆಂಪರರಿ ತಾಂತ್ರಿಕ ಆರ್ಟಿಸ್ಟ್, ಡಾ. ಪ್ರಮಿಳಾ ಲೋಚನ ಅವರ ಮೈಂಡ್ ಮ್ಯೂಜಿಕ್ ಅಂಡ್ ಕಲರ್ ಎಕ್ಸಪೋಜಿಸ್ ಅಂಡ್ ಡೆವೆಲಪ್‌ಮೆಂಟ್ ಆಫ್ ರಾಗಮಾಲಾ ಅಂಡ್ ಕಾಂಟೆಂಪರರಿ ಪೇಂಟಿಂಗ್, ೨೦೦೩ರಲ್ಲಿ ಡಾ. ವೀಣಾ ಶೇಖರ್ ಅವರ ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦-೧೮೨೦), ಡಾ. ಸಿದ್ಧಲಿಂಗಸ್ವಾಮಿ ಅವರ ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ್ ಎಜ್ಯುಕೇಶನ್ ಎಟ್ ಸ್ಕೂಲ್ ಲೆವೆಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೆಷಲ್ ರೆಫೆರೆನ್ಸ್ ಟು ಡ್ರಾಯಿಂಗ್ ಅಂಡ್ ಪೇಂಟಿಂಗ್, ೨೦೦೪ರಲ್ಲಿ ಡಾ. ವಿ.ಎಮ್.ಬಾಗಾಯತ್ ಅವರ ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ ಒಂದು ಅಧ್ಯಯನ (೧೪೦೦-೧೮೦೦), ಡಾ. ಶಿವಕುಮಾರ ಜಿ.ಓ. ಅವರ ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು, ಡಾ.ಪಿ.ಗೌರೀಶ್ ಅವರ ಮೈಸೂರು ಜಿಲ್ಲೆಯ ಜನಪದ ಚಿತ್ರಕಲೆ, ೨೦೦೫ರಲ್ಲಿ ಡಾ. ಶಶಿಕಲಾ ಹೂಗಾರ ಅವರ ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ, ಡಾ. ಶಿವಪ್ರಕಾರ ತುಕ್ಕಣ್ಣವರ ಅವರ ಕರ್ನಾಟಕ ರಥ ಶಿಲ್ಪಕಲೆ, ಡಾ. ಎನ್.ಎನ್. ಚಿತ್ರಗಾರ ಅವರ ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಡಾ. ಎಸ್.ವಿ.ವೆಂಕಟೇಶಯ್ಯ ಅವರ ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು ಒಂದು ಅಧ್ಯಯನ, ೨೦೦೬ರಲ್ಲಿ ಡಾ. ವಿಶ್ವೇಶ್ವರಿ ತಿವಾರಿ ಅವರ ರಂಗೋಲಿ ಕಲೆ, ೨೦೦೭ರಲ್ಲಿ ಡಾ. ಮಲ್ಲಿಕಾರ್ಜುನ ಬಾಗೋಡಿ ಇವರ ಸುರಪುರ

ಡಾ. ಮಲ್ಲಿಕಾರ್ಜುನ ಬಾಗೋಡಿ ಇವರ ಸುರಪುರ ಶೈಲಿಯ ಚಿತ್ರಕಲೆ ಒಂದು ಅಧ್ಯಯನ ಮತ್ತು ಡಾ. ಗೀತಾಂಜಲಿ ಜಿ.ಆರ್. ಅವರ ಐತಿಹಾಸಿಕ ದೀಪಸ್ತಂಭಗಳು, ಡಾ. ರಾಠೋಡ್ ಅವರ ಅನ್ವಯಿಕ ಕಲೆ ಹಿಂದಿನಿಂದ ಇಂದಿನವರೆಗೆ, ೨೦೦೮ರಲ್ಲಿ ಮೋಹನ್ ಪಾಂಚಾಳ ಅವರ ಕಲಾವಿದ ಎಸ್.ಎಂ.ಪಂಡಿತ ಬದುಕು ಮತ್ತು ಕಲೆ, ವಿಶ್ವನಾಥ ಎ.ಎಸ್. ಅವರ ಕರಾವಳಿ ಕರ್ನಾಟಕದ ಯಕ್ಷಗಾನ ಮುಖವರ್ಣಿಕೆ ಹಾಗೂ ವೇಷಭೂಷಣಗಳು, ೨೦೦೯ರಲ್ಲಿ ಡಾ.ಜಿ.ಲಕ್ಷ್ಮೀಪತಿ ಅವರ ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ ಒಂದು ಅಧ್ಯಯನ ಟಿ.ಲಕ್ಕಣ್ಣನವರ ಕರ್ನಾಟಕ ಚಿತ್ರಕಲಾ ಸಾಹಿತ್ಯ ಒಂದು ಅಧ್ಯಯನ, ರವೀದ್ರ ಕಮ್ಮಾರ ಅವರ ಪ್ರೊ.ಜಿ.ಹಿರೇಗೌಡರ ಒಂದು ಅಧ್ಯಯನ ಇವು ದೃಶ್ಯಕಲೆಗಳ ಕುರಿತು ಬಂದ ಪಿಎಚ್.ಡಿ. ಮಹಾಪ್ರಬಂಧಗಳು.

### ಡಿ.ಲಿಟ್. ಮಹಾಪ್ರಬಂಧಗಳು

೨೦೦೫ರಲ್ಲಿ ಡಾ. ಆನಂದ ಪೂಜಾರ ಅವರ 'ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ' ೨೦೦೫ರಲ್ಲಿ ಡಾ.ಡಿ.ಎ.ಉಪಾಧ್ಯ ಅವರ 'ದೃಶ್ಯಕಲೆಗಳ ತೌಲನಿಕ ಅಧ್ಯಯನ', ದೇವದಾಸ ಕಳಸದ ಅವರ ರಂಗಭೂಮಿ ರಂಗಸಜ್ಜಿಕೆಯ ಕಲಾವಿನ್ಯಾಸ, ೨೦೦೯ರಲ್ಲಿ ಎಮ್.ಎಸ್. ಮೂರ್ತಿ ಮಕ್ಕಳ ಚಿತ್ರಕಲೆ, ಡಿ.ಲಿಟ್. ಮಹಾಪ್ರಬಂಧಗಳಾಗಿವೆ.

### ಎಂ.ಫಿಲ್.ಪ್ರಬಂಧಗಳು

೨೦೦೨ರಲ್ಲಿ ಮಲ್ಲಿಕಾರ್ಜುನ ಬಾಗೋಡಿಯವರು ಎಂ.ಫಿಲ್. ಪದವಿಗಾಗಿ ಮಂಡಿಸಿದ 'ಚಿತ್ರಕಲಾವಿದ ಜೆ.ಎಸ್.ಖಂಡೇರಾವ್ : ಒಂದು ಅಧ್ಯಯನ', ಮತ್ತು ೨೦೦೩ರಲ್ಲಿ ಎ.ಎಸ್. ವಿಶ್ವನಾಥ ಅವರ 'ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ', ೨೦೦೫ರಲ್ಲಿ ಶಂಕ್ರಪ್ಪ ಎಂ. ಕುಂದಗೋಳ ಅವರ 'ಕಲಾವಿದ ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಾಲಕೃತಿಗಳು' ಮತ್ತು ಸಿ.ಡಿ.ಜಟ್ಟೆಣ್ಣವರ ಅವರ 'ಕಲಾವಿದ ಡಾ.ಎಂ.ಎ.ಮಿಣಜಗಿಯವರ ಜೀವನ ಮತ್ತು ಕಲಾಕೃತಿಗಳು' ೨೦೦೬ರಲ್ಲಿ ರವಿ ವಸರಾಮ ನಾಯಕ ಇವರ 'ಕಿನ್ನಾಳ ಕಲೆ ಒಂದು ಅಧ್ಯಯನ'[೩], ಸುಚಿತ್ರಾ ಗ.ಲಿಂಗದಳ್ಳಿ ಇವರ 'ವಿಜಯನಗರದ ಭಿತ್ತಿಚಿತ್ರಕಲೆ ಒಂದು ಅಧ್ಯಯನ' ೨೦೦೭ರಲ್ಲಿ ಬಿ.ಎಂ. ಪಾಟೀಲ ಅವರ ನಿಪ್ಪಾಣಿ ವಾಡೆಯ ಭಿತ್ತಿಚಿತ್ರಗಳು, ಶೈಲಾ ಬರಡೋಲ ಅವರ ಸಂತ ಕಲಾವಿದ ಶುಭರಾಯರ ಜೀವನ ಮತ್ತು ಕಲಾಕೃತಿಗಳು, ಉಮೇಶ ಎಸ್. ಅವರ ಕರ್ನಾಟಕ ಜೈನ ಚಿತ್ರಕಲೆ ಹಾಗೂ ಶಶಿಕಾಂತ ಬಸರಿಕಟ್ಟಿಯವರ ಕಲಘಟಗಿ ಕಲೆ, ೨೦೦೮ರಲ್ಲಿ ಕೃಷ್ಣವೇಣಿ ಅವರ ಬಳ್ಳಾರಿ ಜಿಲ್ಲೆಯ ಪ್ರಾಗ್ಯೆತಿಹಾಸಿಕ ಚಿತ್ರಕಲೆ, ಯೋಗೀಶ್ ಹೆಚ್. ಅವರ ಚಿತ್ರದುರ್ಗ ಜಿಲ್ಲೆಯ ಚಿತ್ರಕಲೆ, ಮಹಾಕೂಟೇಶ್ವರಗೌಡ ಪಾಟೀಲ ಅವರ ಬೆಳಗಾವಿ ಜಿಲ್ಲೆಯ ಚಿತ್ರಕಲೆ, ಸುರೇಶ ಬಡಿಗೇರ ಅವರ ,ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಗಳ ,ಚಿತ್ರಕಲೆ,

ಸಂತೋಷಕುಮಾರ ಕುಲಕರ್ಣಿ ಅವರ ದಾವಣಗೆರೆ ಜಿಲ್ಲೆಯ ಚಿತ್ರಕಲೆ, ಜಯರಾಜ ಚಿಕ್ಕಪಾಟೀಲ ಅವರ ಕರ್ನಾಟಕದ ಜಾಹೀರಾತುಗಳಲ್ಲಿ ಸಾಂಸ್ಕೃತಿಕ ನೆಲೆಗಳು, ಮಹೇವ ಉಮತಾರ ಅವರ ಬಿ.ಪಿ.ಬಾಯಿರಿ ಕಲೆ ಮತ್ತು ಕಲಾಸಾಹಿತ್ಯ, ಗಿರಿಜಾ ಬಿರಾದಾರ ಅವರ ಬಿಜಾಪುರ ಜಿಲ್ಲೆಯ ಚಿತ್ರಕಲೆ, ಬಸಯ್ಯ ಗವಿಮಠ ಅವರ ಬಾಗಳಕೋಟೆ ಜಿಲ್ಲೆಯ ಚಿತ್ರಕಲೆ, ಕೃಷ್ಣೇಗೌಡ ಹೆಚ್.ಎನ್. ಅವರ ಕರ್ನಾಟಕದಲ್ಲಿ ಟಿಬೇಟಿಯನ್ನರ ಚಿತ್ರಕಲೆ, ಮಹಾಂತೇಶ ಪಲದಿನ್ನಿ ಅವರ ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳು, ೨೦೦೯ರಲ್ಲಿ ಕಾಂತರಾಜ ಅವರ ಸಿಬಿ ದೇವಾಲಯದ ಭಿತ್ತಿ ಚಿತ್ರಕಲೆ, ರಂಗಸ್ವಾಮಿಯವರು ಚಿತ್ರಕಲಾವಿದರು ಮಾಲೆ ಚನ್ನಬಸಯ್ಯನವರು ಒಂದು ಅಧ್ಯಯನ, ವಿಶ್ವನಾಥ – ಚಿತ್ರದುರ್ಗ ಚಿತ್ರಕಲೆ ಒಂದು ಅಧ್ಯಯನ ಈ ಪ್ರಬಂಧಗಳು ಕರ್ನಾಟಕದ ದೃಶ್ಯಕಲೆ ಕುರಿತಾಗಿ ಬಂದ ಸಂಶೋಧನಾ ಅಧ್ಯಯನಗಳಾಗಿವೆ.

**ದಶಾವತಾರದ ಚಿತ್ರಕಲೆಯ ಕುರಿತು ಇಲ್ಲಿಯವರೆಗೆ ನಡೆದ ಅಧ್ಯಯನಗಳು**

* ೧೯೩೧ರಲ್ಲಿ ಸಿ.ಸಿ.ಇ. ಪಾರಸನ್ಸ್ ಅವರು ಶ್ರೀರಂಗಪಟ್ಟಣದ ಬಗ್ಗೆ ಕಿರುಪುಸ್ತಕ (ಕೈಪಿಡಿ) ಒಂದನ್ನು ಬರೆದಿದ್ದು ಅದರಲ್ಲಿ ದಶಾವತಾರದ ಚಿತ್ರಗಳು ಅರಮನೆಯಲ್ಲಿ ಭಿತ್ತಿಚಿತ್ರಗಳ ಕುರಿತಾಗಿ ವಿವರಣೆ ಕೊಟ್ಟಿರುವುದು ನೋಡಬಹುದು.

* ೧೯೩೬ರಲ್ಲಿ ಪ್ರಕಟವಾದ ವಿಜಯನಗರ ಸಾಮ್ರಾಜ್ಯದ ಆರನೆಯ ಶತಮಾನೋತ್ಸವ ಸಮಾರಂಭದ ಸ್ಮರಣೆ ಸಂಚಿಕೆಯಲ್ಲಿ ಸಿ. ಶಿವರಾಮಮೂರ್ತಿಯವರ "ದಶಾವತಾರದ ಪೇಂಟಿಗ್ಸ್ ಫ್ರಮ್ ಲೇಪಾಕ್ಷಿ" ಹಾಗೂ ಎಸ್. ಪರಮಶಿವನ ಅವರ "ವಿಜಯನಗರ ಪೇಂಟಿಂಗ್ಸ್ ಎಂಬ ಲೇಖನಗಳಿವೆ, ಅವು ಅನುಕ್ರಮವಾಗಿ ಲೇಪಾಕ್ಷಿ ಮತ್ತು ಹಂಪಿಯ ವಿರುಪಾಕ್ಷ ದೇವಾಲಯದ ದಶಾವತಾರದ ಭಿತ್ತಿಚಿತ್ರಗಳ ಬಗೆಗಿನ ವಿವರಗಳನ್ನು ನೀಡುತ್ತವೆ.[೧]

* ೧೯೩೭ರಲ್ಲಿ ಮಕ್ರಿ ಅವರು ಪುಸ್ತಕ ಒಂದನ್ನು ಬರೆದಿದ್ದಾರೆ. ಅದರಲ್ಲಿ ಅಲ್ಲಿನ ದಶಾವತಾರದ ಭಿತ್ತಿಗಳ ವಿಷಯ, ವರ್ಣ ಸಂಯೋಜನೆ ಕುರಿತು ಹೇಳಲಾಗಿದೆ.[೨]

* ೧೯೪೦ರಲ್ಲಿ ಎಂ.ಎಚ್.ಕೃಷ್ಣ ಅವರು ಶ್ರವಣಬೆಳಗೋಳದ ಬಗ್ಗೆ ಒಂದು ಕಿರುಪುಸ್ತಕದಲ್ಲಿ ದಶಾವತಾರದ ಭಿತ್ತಿಚಿತ್ರಗಳ ರಚಿಸಿದ್ದು ಅದರಲ್ಲಿ ಚಿತ್ರಗಳ ವಿವರ ಇದೆ.

---

೧. ಡಾ. ಯಾದಪ್ಪ ಪರದೇಶಿ, ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಪುಟ.೧೫.

೨. ಡಾ. ಎಸ್.ಸಿ.ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ, ಪುಟ.೮

* ೧೯೪೪ರಲ್ಲಿ ಸಿ.ಟಿ.ಎಂ. ಕೊಟ್ರಯ್ಯ ಅವರ ಲೇಖನವು ಹಂಪಿಯ ವಿರೂಪಾಕ್ಷ ದೇವಾಲಯದ ಕೆಲವು ದಶಾವತಾರದ ಚಿತ್ರಗಳ ವಿಷಯ ಕುರಿತು ವಿವರ ನೀಡುತ್ತದೆ. ಅಲ್ಲದೇ ಇಲ್ಲಿ ಚಿತ್ರಗಳ ಕಾಲಮಾನದ ಬಗ್ಗೆಯೂ ಚರ್ಚೆ ಇದೆ.

* ೧೯೬೨ರಲ್ಲಿ ಪ್ರಕಟವಾದ ಪಿ.ಆರ್.ತಿಪ್ಪೇಸ್ವಾಮಿ ಬೆಳೆದುಬಂದ ಭಾರತದ ಚಿತ್ರಕಲೆ ಪುಸ್ತಕದಲ್ಲಿ ದಶಾವತಾರದ ಭಿತ್ತಿಚಿತ್ರಗಳು ಕಂಡುಬರುತ್ತವೆ.

* ೧೯೬೮ರಲ್ಲಿ ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಪುಸ್ತಕದಲ್ಲಿ ಡಾ. ಎಚ್.ತಿಪ್ಪೇರುದ್ರಸ್ವಾಮಿಯವರು ಕರ್ನಾಟಕದ ಭಿತ್ತಿ ಚಿತ್ರಪರಂಪರೆಯನ್ನು ಬಾದಾಮಿ ಚಾಲುಕ್ಯರಿಂದ ಮೈಸೂರು ಅರಸರವರೆಗೆ ಕೆಲವು ದಶಾವತಾರದ ಚಿತ್ರ ನೆಲೆಗಳನ್ನು ಉದಾಹರಿಸುತ್ತ ಚರ್ಚಿಸಿದ್ದಾರೆ.[೩]

* ೧೯೭೧ರಲ್ಲಿ ಡಾ. ಶಿವರಾಂ ಕಾರಂತರ ಇಂಗ್ಲೀಷ ಕೃತಿಯಾದ "ವಿಜಯನಗರ ಮ್ಯೂರಲ್ಸ್" ಇದರಲ್ಲಿ ವಿರೂಪಾಕ್ಷ ದೇವಸ್ಥಾನ ಹಂಪೆ ಅಲ್ಲದೇ ಲೇಪಾಕ್ಷಿ ಮತ್ತು ಇನ್ನಿತರ ಕಡೆಗಳಲ್ಲಿನ ದಶಾವತಾರದ ಭಿತ್ತಿಚಿತ್ರಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ. ಅಲ್ಲದೆ ಇವರ ಇನ್ನೊಂದು ಕೃತಿಯಾದ "ಕರ್ನಾಟಕದಲ್ಲಿ ಚಿತ್ರಕಲೆ" ಎಂಬ ಪುಸ್ತಕವು ಕನ್ನಡ ಹಾಗೂ ಇಂಗ್ಲೀಷ ಎರಡೂ ಭಾಷೆಯಲ್ಲಿ ಪ್ರಕಟಗೊಂಡಿದ್ದು ಇದರಲ್ಲಿ ಬಾದಾಮಿ, ನರಗುಂದ, ನಿಪ್ಪಾಣಿ, ವಿಜಾಪುರದ ಬಳಿಯ ಕುಮಟಗಿ ಹಾಗೂ ಹಂಪೆಯ ಭಿತ್ತಿಚಿತ್ರಗಳ ಕುರಿತು ಚರ್ಚೆ ಇದೆ.

* ೧೯೭೩ರಲ್ಲಿ ಬಿ.ವಿ.ಕೆ. ಶಾಸ್ತ್ರಿ ಅವರು "ಕರ್ನಾಟಕದ ಭಿತ್ತಿಚಿತ್ರಗಳಲ್ಲಿ ದಶಾವತಾರದ ಚಿತ್ರಗಳ ಬಗ್ಗೆ ಕೆಲವು ಕೃತಿ ಪ್ರಕಟಿಸಿದ್ದು ಅದರಲ್ಲಿ ಬಾದಾಮಿ, ಹಂಪಿ, ಮೈಸೂರು, ಹರದನಹಳ್ಳಿ, ಶ್ರವಣಬೆಳಗೋಳ, ಮುಡುಕುತೊರೆ ಮುಂತಾದ ಸ್ಥಳಗಳ ಭಿತ್ತಿಚಿತ್ರಗಳ ಬಗ್ಗೆ ಸಂಕ್ಷಿಪ್ತ ವಿವರಣೆ ಇದೆ. ಪ್ರೊ.ಎಂ.ಎಚ್. ಕೃಷ್ಣಯ್ಯ ಅವರು ತಮ್ಮ ಕೃತಿ "ಶೃಂಗಾರಲಹರಿ"ಯಲ್ಲಿ ವಿಜಯನಗರ ದಶಾವತಾರದ ಭಿತ್ತಿಚಿತ್ರಗಳ ಶೈಲಿ, ಮತ್ತು ವಸ್ತು ವಿಷಯ ಕುರಿತು ಉಪಯುಕ್ತವಾದ ಮಾಹಿತಿ ನೀಡಿದ್ದಾರೆ.

* ೧೯೭೯ರಲ್ಲಿ ಎಂ.ಎಸ್.ನಾಗರಾಜರಾವ್ ಅವರ ಭಾರತೀಯ ಕಲೆಗಳಲ್ಲಿ ದಶಾವತಾರದ ಚಿತ್ರಗಳು ಭಾರತೀಯ ಶಿಲ್ಪ ಮತ್ತು ಭಿತ್ತಿ ಚಿತ್ರಗಳಲ್ಲಿ ರಚನೆಯಾಗಿರುವುದು.

---

೩. ಸುಚಿತ್ರಾ ಗ. ಲಿಂಗದಳ್ಳಿ, ವಿಜಯನಗರದ ಭಿತ್ತಿಚಿತ್ರಕಲೆ, ಪುಟ.

* ೧೯೮೨ರಲ್ಲಿ ಡಾ. ಆರ್.ಎನ್. ಸಾಲೆತೊರೆಯವರು ವಿರೂಪಾಕ್ಷ ದೇವಾಲಯದ ರಂಗಮಂಟಪದ ದಶಾವತಾರದ ಚಿತ್ರಗಳು ಒಳಮಾಳಿಗೆಯ ಭಿತ್ತಿಚಿತ್ರಗಳ ಕಾಲಮಾನವನ್ನು ಕುರಿತು ವಿಜಯನಗರ ಆರ್ಟ್ ಎಂಬ ಕೃತಿಯಲ್ಲಿ ಹೇಳಿದ್ದಾರೆ.

* ೧೯೮೫ರಲ್ಲಿ ಸಿ. ಶಿವರಾಮಮೂರ್ತಿ ಅವರು ರಚಿಸಿದ "ವಿಜಯನಗರ ಪೇಂಟಿಗ್ಸ್" ಎಂಬ ಕೃತಿಯಲ್ಲಿ ಹಂಪಿಯ ವಿರೂಪಾಕ್ಷ ದೇವಾಲಯಗಳು ಒಳಮಾಳಿಗೆಯ ಭಿತ್ತಿಚಿತ್ರಗಳು ಮತ್ತು ಲೇಪಾಕ್ಷಿಯ ಭಿತ್ತಿಚಿತ್ರಗಳ ಕುರಿತಂತೆ ಮಾಹಿತಿ ಇದೆ.

* ೧೯೮೭ರಲ್ಲಿ ಎಂ.ಆರ್.ಶ್ಯಾನಭಾಗ ಅವರ ಲೇಖನ ಕರಾವಳಿ ಭಾಗದ ಕಾಮಿಭಿತ್ತಿ ಚಿತ್ರಗಳಲ್ಲಿ ದಶಾವತಾರವ ಚಿತ್ರಗಳನ್ನು ಕುರಿತು ಪರಿಚಯಿಸಿದೆ. ಡಾ. ಎಸ್.ಸಿ.ಪಾಟೀಲ ಅವರ ಲೇಖನ, ಪ್ರಾಚೀನ ಭಿತ್ತಿ ಚಿತ್ರಗಳಲ್ಲಿ ದಶಾವತಾರದ ರಚನೆಯಲ್ಲಿ ಅನುಸರಿಸುತ್ತಿದ್ದ ಚಿತ್ರಕಲೆಯ ಕುರಿತು ಚರ್ಚಿಸಿದೆ.[೪]

* ೧೯೮೮ರಲ್ಲಿ ಡಾ.ಎಸ್. ರಾಜಶೇಖರ ಅವರು "ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ" ಎಂಬ ಕೃತಿಯಲ್ಲಿ ಬಾದಾಮಿಯ ವೈಷ್ಣವ ಗುಹಾಲಯದ ಭಿತ್ತಿಚಿತ್ರಗಳು ಮತ್ತು ಹಂಪಿಯ ವಿರೂಪಾಕ್ಷ ದೇವಾಲಯದ ಭಿತ್ತಿಚಿತ್ರಗಳ ಬಗ್ಗೆ ಮಾಹಿತಿ ಕೊಟ್ಟಿದ್ದಾರೆ. ಅಲ್ಲದೇ ವಿರೂಪಾಕ್ಷ ದೇವಾಲಯದ ದಶಾವತಾರದ ಚಿತ್ರಗಳ ರಚನೆಯ ಕಾಲದ ವಿಚಾರವಾಗಿ ತಮ್ಮದೇ ಆದ ಚರ್ಚೆಯನ್ನು ಮಾಡಿದ್ದಾರೆ.[೫]

* ೧೯೮೮ರಲ್ಲಿ ಡಾ.ಕೆ.ಎಂ. ಸುರೇಶರವರು ಬರೆದ "ವಿಜಯನಗರ ಪೇಂಟಿಂಗ್ಸ್ ಇನ್ ದಿ ಮುಖಮಂಟಪ ಆಫ್ ವಿರುಪಾಕ್ಷ ಟೆಂಪಲ್ ಎಟ್ ಹಂಪಿ" ಎಂಬ ಇಂಗ್ಲೀಷ ಲೇಖದಲ್ಲಿ ವಿರುಪಾಕ್ಷ ದೇವಸ್ಥಾನದ ಚಿತ್ರಗಳ ಕಾಲದ ಬಗ್ಗೆ ಅಲ್ಲದೇ ಚಿತ್ರಗಳ ವಿಷಯಗಳ ಕುರಿತು ಮತ್ತು ವೈಷ್ಣವ ಧರ್ಮದ ಶಿವನ ಚಿತ್ರಗಳ ಬಗ್ಗೆ ಹೆಚ್ಚಿನ ಮಾಹಿತಿ ನೀಡಿದ್ದಾರೆ.

* ೧೯೮೯ರಲ್ಲಿ ಆರ್.ಎಚ್. ಕುಲಕರ್ಣಿಯವರು ವಿರೂಪಾಕ್ಷ ದೇವಾಲಯದ ಮಹಾರಂಗ ಮಂಟಪದ ದಶಾವತಾರದ ಭಿತ್ತಿಚಿತ್ರಗಳ ಕುರಿತು ವಿವರವಾಗಿ ಅಧ್ಯಯನ ಮಾಡಿದ್ದಾರೆ. ಅಲ್ಲದೇ ಇಲ್ಲಿ ಬರುವ ಯತಿಯೊಬ್ಬರ ಚಿತ್ರದ ಕುರಿತು "ಇದು ವಿದ್ಯಾರಣ್ಯರದಲ್ಲ, ವ್ಯಾಸರಾಯರದೆ" ಎಂಬ ವಿಷಯದ ಮೇಲೆ ಸೂಕ್ಷ್ಮವಾದ ಪರಿಶೀಲನೆಯೊಂದಿಗೆ ಚರ್ಚಿಸಿದ್ದಾರೆ.

* ೧೯೯೨ರಲ್ಲಿ ಪ್ರಕಟಗೊಂಡ ಕರ್ನಾಟಕದ ಜನಪದ ಚಿತ್ರಕಲೆ ಸಂಶೋಧನ ಗ್ರಂಥದಲ್ಲಿ ಡಾ.ಎಸ್.ಸಿ. ಪಾಟೀಲರವರು ವಿಜಯನಗರ ಭಿತ್ತಿಕಲೆಯಲ್ಲಿ ಜನಪದದ ಅಂಶಗಳ ಕಡೆಗೆ ಗಮನ ಸೆಳೆಯುತ್ತಾರೆ.

---

೪. ಡಾ. ಎಸ್.ಸಿ.ಪಾಟೀಲ, ವರ್ಣಸಂಚಯ, ಪುಟ.೩

೫. ಎನ್. ಜಗನ್ನಾಥ, ಶ್ರವಣಬೆಳಗೋಳದ ಭಿತ್ತಿಚಿತ್ರಗಳು, ಕರ್ಮವೀರ (ಅಗಸ್ಟ ೧೫, ೧೯೯೯), ಪುಟ.೩೮-೩೯.

* ೧೯೯೮ರಲ್ಲಿ ಎಸ್.ವೆಂಕಟೇಶ ಅವರ ಲೇಖನ, ಕರ್ಮವೀರ ಪತ್ರಿಕೆಯಲ್ಲಿನ ಶಿರಾದ ಭಿತ್ತಿಚಿತ್ರಗಳು ಮತ್ತು ಪ್ರಜಾವಾಣಿ ದೀಪಾವಳಿ ಸಂಚಿಕೆಯಲ್ಲಿನ ಕೃಷ್ಣನಾಂದ ಕಾಮತ್ ಅವರ ಲೇಖನ ಲೇಪಾಕ್ಷಿ ಭಿತ್ತಿಚಿತ್ರಗಳ ವಿಷಯ ವೈವಿಧ್ಯ, ವರ್ಣಗಾರಿಕೆ ಕುರಿತು ಇಲ್ಲಿ ಚರ್ಚಿಸಿದ್ದಾರೆ.

* ೨೦೦೨ರಲ್ಲಿ ಪ್ರಕಟಗೊಂಡ "ಕರ್ನಾಟಕ ಸಂಗಾತಿ" ಎಂಬ ಗ್ರಂಥದಲ್ಲಿ ಡಾ.ಅ.ಲ. ನರಸಿಂಹನವರು ವಿಜಯನಗರ ಕಾಲದ ಚಿತ್ರಕಲೆ ಕುರಿತಾಗಿ ಒಂದು ಲೇಖನ ಪ್ರಕಟಗೊಂಡಿದ್ದು, ವಿಜಯನಗರ ಚಿತ್ರಕಲೆಯ ಕಾಲಮಾನದ ಬಗ್ಗೆ ಪ್ರಸ್ತಾಪಿಸಿದ್ದಾರೆ. ಅಲ್ಲದೆ ಭಿತ್ತಿಚಿತ್ರಗಳ ರಚನಾ ವಿಧಾನ ತಾಂತ್ರಿಕತೆ, ವೇಷಭೂಷಣಗಳ ಬಗ್ಗೆ ಹೇಳಿದ್ದಾರೆ. ಅಲ್ಲದೇ ತಮ್ಮ ಸಂಶೋಧನಾ ಗ್ರಂಥವಾದ "ಕರ್ನಾಟಕ ಭಿತ್ತಿಚಿತ್ರ ಪರಂಪರೆಯಲ್ಲಿ ವಿಜಯನಗರ ಚಿತ್ರಕಲೆಯ ವಿಷಯವಸ್ತು ಶೈಲಿ ಕುರಿತು ಪ್ರಸ್ತಾಪಿಸಿದ್ದಾರಲ್ಲದೇ, ಭಿತ್ತಿಸಿದ್ಧತಾ ಕ್ರಮ, ಮತ್ತು ರಕ್ಷಣಾ ಕ್ರಮಗಳ ಕುರಿತು ಉಲ್ಲೇಖಿಸಿದ್ದಾರೆ. ಮತ್ತು ಅವರ ಇನ್ನೊಂದು ಕೃತಿಯಾದ 'ಆಲೇಖ್ಯಾ'ದಲ್ಲೂ ಕೂಡಾ ಪ್ರಸ್ತುತ ಭಿತ್ತಿ ಚಿತ್ರಗಳ ನೆಲೆಗಳು ಮತ್ತು ಚಿತ್ರಗಳ ಶೈಲಿ, ವಸ್ತು, ವಿಷಯ ಕುರಿತು ಪ್ರಸ್ತಾಪಿಸಿದ್ದಾರೆ.[೬]

* ೨೦೦೨ರಲ್ಲಿ ಡಾ. ಯಾದಪ್ಪ ಪರದೇಶಿಯವರು ತಮ್ಮ ಪಿಎಚ್.ಡಿ ಮಹಾಪ್ರಬಂಧವಾದ "ಉತ್ತರ ಕರ್ನಾಟಕದ ಭಿತ್ತಿಚಿತ್ರಗಳು" ಎಂಬ ಪ್ರಬಂಧದಲ್ಲಿ ಹಂಪಿಯ ವಿರೂಪಾಕ್ಷ ದೇವಾಲಯದ ರಂಗಮಂಟಪದ ದಶಾವತಾರದ ಭಿತ್ತಿಚಿತ್ರಗಳ ಕುರಿತು ಅಧ್ಯಯನ ಮಾಡಿದಾರೆ. ಈ ಎಲ್ಲಾ ಪ್ರಯತ್ನಗಳನ್ನು ಗಮನಿಸಿ, ಹೊಸ ವಿಷಯವನ್ನು ಸಂಗ್ರಹಿಸಿ ಪ್ರಸ್ತುತ ಪ್ರಬಂಧವನ್ನು ರೂಪಿಸಲಾಗಿದೆ.

* ಎಸ್. ವೆಂಕಟೇಶ್ ಅವರು ಸಂಯುಕ್ತ ಕರ್ನಾಟಕ ದಿನಪತ್ರಿಕೆ ೨೦.೧೦.೨೦೦೨ರಲ್ಲಿ ಹಂಪೆಯ ಭಿತ್ತಿಚಿತ್ರಗಳು 'ಕಲೆಯ ಗುಡಿಗೆ ಕವಿದ ಮಸುಕು' ಲೇಖನದಲ್ಲಿ ದಶಾವತಾರದ ಭಿತ್ತಿ ಚಿತ್ರಗಳನ್ನು ಉಲ್ಲೇಖಿಸಿದ್ದಾರೆ.

* ೨೦೦೯ರಲ್ಲಿ ಡಾ.ಎಸ್.ಸಿ.ಪಾಟೀಲರು "ಮ್ಯೂರಲ್ ಪೇಂಟಿಂಗ್ಸ್ ಆಫ್ ವಿರೂಪಾಕ್ಷ ಟೆಂಪಲ್ಸ್ ಆಫ್ ವಿಜಯನಗರ ಎಂಪಾಯರ್" ಎಂಬ ಲೇಖನ ಬರೆದಿದ್ದಾರೆ. ಇಂಡಿಯನ್ ಹಿಸ್ಟರಿ ಕಾಂಗ್ರೆಸ್ ದೆಹಲಿಯಲ್ಲಿ ೬೯ನೇ ವಾರ್ಷಿಕ ಅಧಿವೇಶನದಲ್ಲಿ ಮಂಡಿಸಿದ್ದಾರೆ. ಇಲ್ಲಿಯೂ ದಶಾವತಾರದ ಚಿತ್ರಗಳ ಪ್ರಸ್ತಾಪವಿದೆ.

---

೬. ಡಾ. ಅ.ಲ.ನರಸಿಂಹನ್, ಕರ್ನಾಟಕದ ಭಿತ್ತಿ ಚಿತ್ರ ಪರಂಪರೆ, ಪುಟ.೧೮೪.

* ೨೦೧೦ರಲ್ಲಿ 'ಸ್ಮೃತಿ ಸಂಚಲನ' ಕೃತಿಯಲ್ಲಿ ಡಾ.ಎಸ್.ಸಿ.ಪಾಟೀಲರು ಭಿತ್ತಿಚಿತ್ರ ಕಲೆಯ ಇತಿಹಾಸ, ಜಿ.ಕೆ.ಹಳ್ಳಿ ಭಿತ್ತಿಚಿತ್ರಕಲೆ, ಬಳ್ಳಾರಿ ಜಿಲ್ಲೆಯ ಚಿತ್ರಕಲೆ, ಈ ಮೂರು ಲೇಖನಗಳಲ್ಲಿ ಪ್ರಾಸಂಗಿಕವಾಗಿ ದಶಾವತಾರದ ಕುರಿತು ಪ್ರಸ್ತಾಪಿಸಿದ್ದಾರೆ.

## ಅಧ್ಯಯನದ ಉದ್ದೇಶ:

ಕರ್ನಾಟಕದ ಚಿತ್ರಕಲಾ ಪರಂಪರೆಯಲ್ಲಿ ದಶಾವತಾರದ ಕಲ್ಪನೆಗಳಿಗೆ ತನ್ನದೇ ಆದ ಮಹತ್ವವಿದೆ. ಕರ್ನಾಟಕದ ಚಿತ್ರಕಲಾಕಾರರು ತಮ್ಮ ಕಲಾ ಪ್ರತಿಭೆಗಳನ್ನು ವ್ಯಕ್ತಪಡಿಸಿರುವ ಅನೇಕ ನೆಲೆಗಳು ಇಲ್ಲಿವೆ. ಮಠಮಾನ್ಯ, ದೇವಾಲಯ, ಸ್ಥಿತಿವಂತರ ಗೃಹ ಮುಂತಾದ ಸ್ಥಳಗಳಲ್ಲಿ ಭಿತ್ತಿಗಳಲ್ಲಿ, ಹಸ್ತಪ್ರತಿಗಳು, ಗಾಜಿನ ಚಿತ್ರಗಳಲ್ಲಿ, ಗಂಜೀಫಾ ಕಲೆ, ಕಿನ್ನಾಳ ಕಲೆ, ಮರದ ಮೇಲಿನ ಮಾಧ್ಯಮದಲ್ಲಿ ಚಿತ್ರ ರಚಿಸುವ ಮೂಲಕ ಕರ್ನಾಟಕದ ಜನರು ಕಲಾ ಪೋಷಕರಾಗಿದ್ದಾರೆ. ಹಿಂದಿನ ಪರಂಪರೆಯನ್ನು ಉಳಿಸುವುದರ ಜೊತೆಗೆ ಕರ್ನಾಟಕದ ಜಿಲ್ಲೆಯ ಸಾಂಸ್ಕೃತಿಕ ಹಿರಿಮೆಯನ್ನು ಹೆಚ್ಚಿಸಿದ್ದಾರೆ. ಇಂತಹ ಚಿತ್ರಕಲೆ ಪ್ರದೇಶದಿಂದ ಪ್ರದೇಶಕ್ಕೆ ವಿಭಿನ್ನತೆಯನ್ನು ಕಂಡುಕೊಂಡಿವೆ. ಆ ಪ್ರದೇಶದ ಜನರ ಜೀವನ ವಿಧಾನ, ಆಚಾರ, ಧರ್ಮ, ವಿಚಾರ, ನಂಬಿಕೆ, ಧರ್ಮ ಮುಂತಾದವುಗಳು ಕಲಾವಿದನ ವ್ಯಕ್ತಿತ್ವದ ಮೇಲೆ ಪರಿಣಾಮ ಬೀರಿ ಕಲೆಯಾಗಿ ಹೊರಹೊಮ್ಮುತ್ತದೆ. ಯಾವುದೇ ಕಾಲದ ದಶಾವತಾರದ ಚಿತ್ರಗಳು ಧಾರ್ಮಿಕ, ಐತಿಹಾಸಿಕ ಹಾಗೂ ಸಾಂಸ್ಕೃತಿಕ ಕಲಾ ಇತಿಹಾಸವನ್ನು ತಿಳಿಯಲು "ದಶಾವತಾರದ ಚಿತ್ರಗಳ ಅಧ್ಯಯನ"ವು ಮಹತ್ವದ್ದಾಗಿದೆ. ಇಂಥಹ ವಿಚಾರಕ್ಕೆ ಬೆಳಕು ಚೆಲ್ಲುವ ಉದ್ದೇಶವನ್ನು ಇಟ್ಟುಕೊಂಡು ಸಂಶೋಧನೆ ನಡೆಸಲಾಗಿದೆ.

ದಶಾವತಾರದ ಚಿತ್ರಕಲೆಗಳಲ್ಲಿ ಕಲಾ ಇತಿಹಾಸವನ್ನು ಹಲವಾರು ಹಂತಗಳಲ್ಲಿ ಗುರುತಿಸಬಹುದಾಗಿದೆ. ಈ ಹಿನ್ನಲೆಯಲ್ಲಿ ದಶಾವತಾರದ ಚಿತ್ರಗಳ ಅಧ್ಯಯನವೆಂದರೆ ಆಯಾ ಭಾಷೆ ಪ್ರದೇಶ ಸಂಸ್ಕೃತಿ, ದೇಶಿ ಚಿಂತನೆ ಎಂದರೆ ತಪ್ಪಾಗಲಾರದು, ದಶಾವತಾರದ ಚಿತ್ರಗಳನ್ನು ರಚಿಸುವ ಪರಂಪರೆ ಇಂದಿಗೂ ವಿವಿಧ ಉದ್ದೇಶಗಳಿಗಾಗಿ ಮುಂದುವರಿಸಿಕೊಂಡು ಬಂದಿದೆ. ಇಂದಿನ ಆಧುನಿಕ ಕಲಾವಿದರು ಸಹ ತಮ್ಮ ಕಲಾಕೃತಿಗಳಲ್ಲಿ ಈ ಚಿತ್ರಗಳ ಪ್ರಭಾವವನ್ನು ನಾವು ಕಾಣುತ್ತೇವೆ. ಅದೇ ರೀತಿಯಾಗಿ ಪಾಶ್ಚಾತ್ಯ ಕಲಾವಿದರು ಹಾಗೂ ಭಾರತೀಯ ಕಲಾವಿದರು ಕೃತಿಯಲ್ಲಿ ಕಾಣಬಹುದಾಗಿದೆ. ಕರ್ನಾಟಕದಲ್ಲಿ ಇಲ್ಲಿಯವರೆಗೆ ಇವುಗಳ ಕುರಿತು ಯಾವುದೇ ರೀತಿಯ ಗಂಭೀರ ಅಧ್ಯಯನಗಳು ನಡೆದಿರುವುದಿಲ್ಲ. ನಮ್ಮ ಸಂಸ್ಕೃತಿಯ ಬಹುಮುಖ್ಯ ವಾಹಿನಿಗೆಳಲ್ಲಾದ ಕಲಾ ಪ್ರಕಾರಗಳಲ್ಲಿ ಈ ಚಿತ್ರಗಳು ಪ್ರಮುಖವಾಗಿದೆ. ಇದು ಒಂದೊಂದು ಕಾಲದ ಸಾಂಸ್ಕೃತಿಕ ಅಭಿವ್ಯಕ್ತಿಯಾಗಿ ಬೆಳೆದು ಬಂದಿರುವ ಇತಿಹಾಸದ ಪರಂಪರೆಯನ್ನು

ಪರಿಚಯಿಸುವ ಸ್ಥೂಲ ನೋಟವು ಅಧ್ಯಯನದ ಹಿನ್ನೆಲೆಯಲ್ಲಿವೆ. ದಶಾವತಾರದ ಚಿತ್ರಗಳಲ್ಲಿ ದೇವರುಗಳು ಜನಾಂಗದ ಸಂಸ್ಕೃತಿಯನ್ನು ತಿಳಿಸುವ ಮಹತ್ವದ ದಾಖಲೆಗಳಾಗಿವೆ. ಇಂತಹ ಅಧ್ಯಯನವೊಂದರ ಅವಶ್ಯಕತೆ ತುಂಬಾ ಇರುವುದರಿಂದ ಪ್ರಸ್ತುತ ಅಧ್ಯಯನವನ್ನು ಮಾಡುವ ಉದ್ದೇಶ ಹೊಂದಿದೆ. ಪ್ರತಿಯೊಂದು ಚಿತ್ರಗಳಲ್ಲಿ, ಪುರಾಣ, ಕಥೆ, ಆಚರಣೆ, ನಂಬಿಕೆ, ಸಂಪ್ರದಾಯದ ವಿವಿಧ ವಿಧಾನಗಳನ್ನು ಅಭ್ಯಾಸಿಸಿ ಅವುಗಳನ್ನು ದಾಖಲಿಸುವ ಕಾರ್ಯ ಈ ಅಧ್ಯಯನದ ಮೂಲ ಉದ್ದೇಶವಾಗಿದೆ.

ಇಲ್ಲಿನ ಭಿತ್ತಿಗಳಲ್ಲಿ ಸಾಂಪ್ರದಾಯಕ ಶೈಲಿ ಕಂಡುಬರುತ್ತದೆ. ಇಂತಹ ಭಿತ್ತಿ ಚಿತ್ರಗಳ ನಾಡಿನ ಹಲವಾರು ದೇವಾಲಯಗಳಲ್ಲಿ ಮಠಮಾನ್ಯಗಳ, ಅರಮನೆಗಳ ಚರ್ಚ್‌ಗಳ ಮಸೀದಿ ಹಾಗೂ ಶ್ರೀಮಂತ ವರ್ಗದವರೆ ಮನೆಗಳ ಗೋಡೆ, ಛಾವಣಿ, ತೊಲೆ, ಹಲಿಗೆ, ತಾಳೆಗರಿ, ಹೀಗೆ ಹಲವಾರು ಮಾಧ್ಯಮಗಳ ಮೇಲೆ ರಚನೆಗೊಂಡಿರುವುದು ಈಗಲೂ ನೋಡಲು ಸಿಗುತ್ತವೆ. ಇವುಗಳ ರಚನಾ ವಿಧಾನ, ತಂತ್ರಗಾರಿಕೆ, ಶೈಲಿ, ಪ್ರೇರಣೆ, ಪ್ರೋತ್ಸಾಹ, ವಸ್ತು–ವಿಷಯ, ಸಾಮಾಜಿಕ ಜವಾಬ್ದಾರಿ, ಆರ್ಥಿಕ ಮತ್ತು ರಾಜಕೀಯ ಸ್ಥಿತಿಗತಿಗಳನ್ನು ತಿಳಿಯಲು ಇಂತಹ ಅಧ್ಯಯನಗಳು ಅತ್ಯವಶ್ಯಕ. ದಶಾವತಾರದ ಚಿತ್ರಗಳಲ್ಲಿ ಕಲಾತ್ಮಕತೆ, ರಚನಾ ವಿನ್ಯಾಸ, ಬಣ್ಣಗಳ ಬಳಕೆ ಕಲಾವಿದರ ಕುರಿತಾದ ವಿವರಗಳನ್ನು ಇಲ್ಲಿ ಸ್ಥೂಲವಾಗಿ ಗಮನಿಸುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ ಕರ್ನಾಟಕದಲ್ಲಿ ಹಲವಾರು ವೈವಿಧ್ಯತೆಯುಳ್ಳ ದೈವೀ ಚಿತ್ರಗಳು, ಪುರಾಣ, ಕಥೆ, ಇಂತಹ ಅವತಾರದ ಚಿತ್ರಗಳನ್ನು ಅಧ್ಯಯನ ಮಾಡಲಾಗುವುದು, ಅವುಗಳು ತುಂಬಾ ಆಕರ್ಷಕವಾಗಿದ್ದು, ಅವುಗಳು ಅಲ್ಲಲ್ಲಿ ಹರಿದು ಹಂಚಿಹೋಗಿವೆ. ಈ ದಶಾವತಾರದ ಚಿತ್ರಗಳಲ್ಲಿ ವಸ್ತು–ವಿಷಯ ಒಂದು ಕಡೆಗೆ ಶೋಧಿಸಿ ಕ್ರಮಬದ್ಧವಾಗಿ ಜೋಡಿಸಿ ಅವುಗಳ ಸಿದ್ದತೆಯ ಹಿನ್ನಲೆ ಮುಂತಾದವುಗಳನ್ನು ಕುರಿತು ಇಲ್ಲಿ ಅಧ್ಯಾಯನ ಮಾಡುವ ಉದ್ದೇಶವನ್ನು ಇಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

ಚಿತ್ರಕಲೆಯು ದೇವಾಲಯ, ಮಠ, ಮಸೀದಿಯಲ್ಲಿ ದ್ವಾರಬಾಗಿಲಿನಲ್ಲಿ ಬಿಡಿಸುವ ಸಂಪ್ರಾದಾಯ ಬೆಳೆದು ಬಂದಿರವುದನ್ನು ಇದರಲ್ಲಿ ಕಾಣಬಹುದು. ಗೋಡೆ, ಮರ, ಎಲೆ, ಕಾಗದ ಹೀಗೆ ರಚನೆಯಾಗಿರುವುದನ್ನು ಗುರುತಿಸುವ ಕಾರ್ಯದ ಉದ್ದೇಶವಿದೆ ಅದರ ಈ ರಚನೆ ಕಲಾವಿದರ ಹಿನ್ನಲೆ ಅಥವಾ ಸಿದ್ಧತಾ ಪರಿಕರಗಳ ಕಲಾವಿದರ ಆರ್ಥಿಕ ಸಾಮಾಜಿಕ ಸ್ಥಿತಿಗಳ ಕುರಿತು ಸಹ ಇಲ್ಲಿ ಅಧ್ಯಯನ ಮಾಡುವ ಇಂದಿನ ಸಮಕಾಲೀನ ಕಲೆಗೆ ಈ ದಶಾವತಾರದ ಚಿತ್ರಗಳು ಹೇಗೆ ಪ್ರೇರಣೆ ನೀಡುತ್ತವೆ. ಎಂಬುದರಂತೆ ಗಮನ ಹರಿಸುತ್ತಾ ಸಮಕಾಲೀನತೆಗೆ ಈ ಚಿತ್ರಗಳು ಪ್ರಸ್ತುತಗೊಳ್ಳುವ ಕುರಿತು ಸಹ ಅಧ್ಯಯನ ಮಾಡುವ ಉದ್ದೇಶ ಹೊಂದಲಾಗಿದೆ. ಅಧ್ಯಯನಕ್ಕೆ ಆಕರವಾಗಿವೆ. ಇಲ್ಲಿ ರಚನೆಗೊಂಡಿರುವ ದಶಾವತಾರದ ಚಿತ್ರಗಳ ವಸ್ತು ವಿಷಯವು ಒಂದೇ

ಆಗಿದ್ದರೂ (ರಾಮಾಯಣ, ಪುರಾಣ, ಮಹಾಭಾರತ, ಭಾಗವತ ಪುರಾಣ ಬರುವ ವಸ್ತು ವಿಷಯ) ಒಂದು ನೆಲೆಯಿಂದ ಮತ್ತೊಂದು ನೆಲೆಗೆ ಸಂಯೋಜನೆ, ರೇಖೆ, ಬಣ್ಣ ಹಾಗೂ ಶೈಲಿಯ ದೃಷ್ಟಿಯಿಂದ ಭಿನ್ನವಾಗಿರುವುದು ಕಂಡು ಬರುತ್ತದೆ. ಹಾಗೂ ಕರ್ನಾಟಕದ ಜಿಲ್ಲೆಯ ದಶಾವತಾರದ ಚಿತ್ರಗಳನ್ನು ಕುರಿತಾದ ಸಮಗ್ರ ಅಧ್ಯಯನ ಇದುವರೆಗೆ ನಡೆದಿಲ್ಲವಾದ್ದರಿಂದ ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗುವ ಉದ್ದೇಶವನ್ನು ಹೊಂದಲಾಗಿದೆ.

### ಅಧ್ಯಯನದ ಸ್ವರೂಪ

"ಕರ್ನಾಟಕದ ಚಿತ್ರಕಲೆಯಲ್ಲಿ ದಶಾವತಾರದ ಕಲ್ಪನೆ" ಎಂಬ ಅಧ್ಯಯನದಲ್ಲಿ ಒಂಭತ್ತು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಈ ಒಂಭತ್ತು ಅಧ್ಯಾಯಗಳು ಪ್ರತ್ಯೇಕವಾದ ವಸ್ತು ವಿಷಯಗಳನ್ನು ಒಳಗೊಂಡಿರುತ್ತವೆ. ಇವುಗಳ ಸಂಕ್ಷಿಪ್ತ ಸ್ವರೂಪವನ್ನು ಇಲ್ಲಿ ನೀಡಿದೆ.

**ಮೊದಲನೆಯ ಅಧ್ಯಾಯದಲ್ಲಿ,** ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವಿಧಾನ ಒಳಗೊಂಡಿದೆ. ಉದ್ದೇಶದಲ್ಲಿ ಕಲೆಯ ಕುರಿತಾದ ಉಗಮ ಹಾಗೂ ಈ ಅಧ್ಯಯನವು ಪ್ರಸ್ತುತ ದಿನದಲ್ಲಿ ಎಷ್ಟು ಅವಶ್ಯಕ, ಎಂಬುದು ವಿವರಣೆ ನೀಡಲಾಗಿದೆ. ಕ್ಷೇತ್ರ ಕಾರ್ಯದ ಪ್ರಧಾನ ಆಕರಗಳ ಮೇಲೆ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ ಎಂಬುದರ ಸಂಕ್ಷಿಪ್ತ ಮಾಹಿತಿ ನೀಡಲಾಗಿದೆ.

**ಎರಡನೆಯ ಅಧ್ಯಾಯದಲ್ಲಿ,** ದಶಾವತಾರದ ಚಿತ್ರಗಳ ಐತಿಹಾಸಿಕ ಹಿನ್ನೆಲೆ ಹೇಳುತ್ತಾ ಕರ್ನಾಟಕದಲ್ಲಿ ಬೆಳವಣಿಗೆ ಹೊಂದಿದ ಬಗೆಯನ್ನು ಕುರಿತು ಒಂದು ಸ್ಥೂಲವಾದ ನೋಟವನ್ನು ಕಟ್ಟಿಕೊಡಲಾಗಿದೆ, ಇಲ್ಲಿರುವ ನೆಲೆಗಳ ಕುರಿತು ಹಾಗೂ ಪ್ರತಿಯೊಂದು ನೆಲೆಗಳಲ್ಲಿ ರಚನೆಗೊಂಡಿರುವ ಚಿತ್ರಗಳ ವಸ್ತು ವಿಷಯಗಳನ್ನು ಸ್ಥೂಲವಾಗಿ ವಿಶ್ಲೇಷಿಸಲಾಗಿದೆ.

**ಮೂರನೆಯ ಅಧ್ಯಾಯವು,** ಕರ್ನಾಟಕದಲ್ಲಿ ದಶಾವತಾರದ ಭಿತ್ತಿ ಮಾಧ್ಯಮದ ಚಿತ್ರಗಳು ಕುರಿತು ಹಂಪಿ ಶಿಬಿ, ಹೀಗೆ ಹಲವಾರು ಪ್ರದೇಶ ದೇವಾಲಯಗಳನ್ನು, ಮಠ, ಮಸೀದಿ, ಪುರಾಣಕ್ಕೆ ಸಂಬಂಧಿಸಿದ ದೇವಾಲಯ ಹಾಗೂ ಕಲಾವಿದರ ಮನೆಯ ಗ್ರಂಥಗಳಲ್ಲಿ ಲಭ್ಯವಿರುವ ಮಾಹಿತಿ ವಿಶ್ಲೇಷಿಸಲಾಗಿದೆ.

**ನಾಲ್ಕನೆಯ ಅಧ್ಯಾಯದಲ್ಲಿ,** ದಶಾವತಾರದ ಹಸ್ತಪ್ರತಿ ಮಾಧ್ಯಮದಲ್ಲಿ ಬರುವ ಧರ್ಮಗ್ರಂಥಗಳ ಹಸ್ತಪ್ರತಿಯ ವಿಶೇಷವಾಗಿ ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ವಸ್ತು-ವಿಷಯ ಸಂಯೋಜನೆ ಕುರಿತು ವೈಷ್ಣವ ಧರ್ಮ, ಚಿತ್ರಗಳ ವಸ್ತು ವಿಷಯವು ಬೇರೆ ಬೇರೆ ನೆಲೆಗಳಲ್ಲಿದ್ದರೂ ಒಂದರಿಂದ ಮತ್ತೊಂದಕ್ಕೆ ಹೇಗೆ ಭಿನ್ನವಾಗಿದೆ. ಅವುಗಳ ಶೈಲಿ ಹಾಗೂ ಕಲಾವಿದರ ತಂತ್ರಗಾರಿಕೆಯ ಕುರಿತು ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ, ಕರ್ನಾಟಕದಲ್ಲಿ ದಶಾವತರ ಚಿತ್ರಗಳು ಗಂಜೀಫಾ ಮಾಧ್ಯಮದ ಮೈಸೂರ ಶೈಲಿಯಲ್ಲಿದ್ದು, ಕಾಗದದ ಮೇಲಿನ ಮರಗಳ ಮೇಲೆ ರಚಿಸಿದ್ದು, ಅವುಗಳ ತಂತ್ರಗಾರಿಕೆ, ಸಂಯೋಜನೆ, ಹೀಗೆ ಭಿನ್ನವಾಗಿವೆ. ಅವುಗಳ ಶೈಲಿ ಹಾಗೂ ಕಲಾವಿದರ ಕುರಿತು ಅಧ್ಯಯನ ಚರ್ಚಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ, ದಶಾವತಾರದ ಚಿತ್ರಗಳ ಕಾಗದ ಮಾಧ್ಯಮ, ಮೇಲಿನ ಚಿತ್ರ ರಚನೆಯ ವಸ್ತು ವಿಷಯದ ಕುರಿತು ಕಿನ್ನಾಳ ಕಲೆಯ ರೇಖಾಚಿತ್ರಗಳು ಹೀಗೆ ಹಲವಾರು ಚಿತ್ರದೃಶ್ಯಗಳನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ.

**ಏಳನೆಯ ಅಧ್ಯಾಯದಲ್ಲಿ,** ದಶಾವತಾರದ ಚಿತ್ರಗಳ ಮರ ಮಾಧ್ಯಮ ಹಸ್ತಪ್ರತಿ ಕಟ್ಟುಗಳ ರಟ್ಟಿನ ಚಿತ್ರಗಳನ್ನು ಕಲಘಟಗಿಯಲ್ಲಿನ ಚಿತ್ರಗಳನ್ನು ಗರುತಿಸಿಕೊಂಡು ಇಲ್ಲಿ ಅಧ್ಯಯನ ಕುರಿತು ಮಾಡಲಾಗುತ್ತಿದೆ.

**ಎಂಟನೆಯ ಅಧ್ಯಾಯದಲ್ಲಿ** ಈ ಮೇಲಿನ ಎಲ್ಲಾ ಮಾಧ್ಯಮದಲ್ಲಿನ ದಶಾವತಾರದ ಕಲ್ಪನೆ ಕುರಿತು ವಿಶ್ಲೇಷಣಾತ್ಮಕವಾಗಿದೆ. ತೌಲನಿಕವಾಗಿ ಅಧ್ಯಯನ ಕುರಿತು ಚರ್ಚಿಸಲಾಗಿದೆ.

**ಒಂಭತ್ತನೆಯ ಅಧ್ಯಾಯವು** ಸಮಾರೋಪವಾಗಿದ್ದು, ಮೇಲಿನ ಒಂಭತ್ತು ಅಧ್ಯಾಯಗಳಲ್ಲಿ ಕಂಡುಬಂದಂತಹ ಮೂಲ ಫಲಿತಾಂಶಗಳನ್ನು ವಿವರಣಾತ್ಮಕವಾಗಿ ವಿವರಿಸಲಾಗಿದೆ. ಸಂಶೋಧನೆಯಲ್ಲಿ ಕಂಡುಬಂದಂತ ಉತ್ತಮ ಮಾಹಿತಿಗಳನ್ನು ತಿಳಿಸುವ ಹಾಗೂ ಗುರುತಿಸುವ ಕಾರ್ಯವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಒಟ್ಟಾರೆ ಇಡೀ ಪ್ರಬಂಧದ ಸಾರಾಂಶವನ್ನು ಇದರಲ್ಲಿ ಸಂಗ್ರಹಿಸುವ ಕಾರ್ಯವನ್ನು ಮಾಡಲಾಗಿದೆ.

**ಅಧ್ಯಯನದ ವಿಧಾನ**

ಈ ಸಂಪ್ರಬಂಧದಲ್ಲಿ ಎರಡು ರೀತಿಯ ವಿಧಾನವನ್ನು ಬಳಸಿಕೊಳ್ಳಲಾಗಿದೆ. ಅವುಗಳು ಕೆಳಗಿನಂತಿವೆ.

೧. ಮೂಲ ಆಕರ ಸಾಮಾಗ್ರಿಗಳು

೨. ಆನುಷಂಗಿಕ ಆಕರ ಸಾಮಾಗ್ರಿಗಳು

**೧. ಮೂಲ ಆಕರ ಸಾಮಾಗ್ರಿಗಳು:**

ಮೂಲ ಆಕರ ಸ್ವಾಮಾಗ್ರಿಗಳಲ್ಲಿ ಕ್ಷೇತ್ರಕಾರ್ಯ ಅತಿ ಮುಖ್ಯವಾದ ಅಂಶವಾಗಿದ್ದು. ಅಧ್ಯಯನ ಕ್ರಮಕ್ಕೆ ಅಗತ್ಯವಾಗಿ ಬೇಕಾಗುವಂತಹದು. ಒಂದು ನಾಡಿನ ಸಂಸ್ಕೃತಿ, ಕಲಾ ಇತಿಹಾಸ ಕಲೆ 'ವಿಷಯಗಳ ಬಗ್ಗೆ ಸಂಶೋಧನಾತ್ಮಕವಾಗಿ ಕ್ಷೇತ್ರಕಾರ್ಯ ಮುಖ್ಯವಾಗುತ್ತದೆ.

ಇದು ಮೂಲ ಆಕರ ಸಾಮಾಗ್ರಿಗಳಿಂದ ಮಾಹಿತಿ ಸಂಗ್ರಹಿಸಲು ಸುಲಭ ಮಾರ್ಗವಾಗಿದೆ. ಈ ಅಧ್ಯಯನಕ್ಕೆ ಮೂಲ ಆಕರ ಸಾಮಾಗ್ರಿಯಾಗಿ ಮೂಲ ದಶಾವತಾರದ ಚಿತ್ರಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಕ್ಷೇತ್ರಕಾರ್ಯದಲ್ಲಿ ಅವಲೋಕನ ಅತಿ ಮುಖ್ಯವಾದ ಅಂಶವಾಗಿದ್ದು ಮೂಲ ದಶಾವತಾರದ ಚಿತ್ರಗಳು ಇರುವ ಕಡೆಗೆ ಅನೇಕ ಭಾರಿ ಭೇಟಿಕೊಟ್ಟು ಚಿತ್ರಗಳನ್ನು ಸೂಕ್ಷ್ಮವಾದ ಗಮನಿಸಿ ಛಾಯಚಿತ್ರಣ ಮಾಡಿಕೊಂಡು ಅದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಅದೇ ಸ್ಥಳದಲ್ಲಿ ಬರೆದುಕೊಳ್ಳಲಾಯಿತು. ಮೂಲ ಚಿತ್ರಗಳು ಲಭ್ಯವಿಲ್ಲದ ಸಮಯದಲ್ಲಿ ಅವುಗಳನ್ನು ಪ್ರತಿ ಮಾಡಿಟ್ಟುಕೊಂಡು ಅಥವಾ ಛಾಯಚಿತ್ರಣ ಮಾಡಿ ಕಾದಿಡಲಾಗಿದೆ. ಮತ್ತು ವಸ್ತು ಸಂಗ್ರಹಾಲಯಗಳಿಗೆ ಭೇಟಿಕೊಟ್ಟು ವಿಷಯ ಸಂಗ್ರಹ ಮಾಡಿಕೊಳ್ಳಲಾಗಿದೆ. ಆ ವಿಷಯ ಸಂಬಂಧಿಸಿದ ಕ್ಷೇತ್ರಕಾರ್ಯದಲ್ಲಿ ಹಲವಾರು ವಿದ್ವಾಂಸರ ಜೊತೆಗೆ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಇದೆ ಕ್ಷೇತ್ರಕಾರ್ಯದಿಂದ ದೊರೆತ ವಿವರಗಳನ್ನು ಅಭ್ಯಾಸಕ್ಕೆ ಬರವಣಿಗೆಗೆ ಅನುಕೂಲವಾಗುವಂತೆ ಪಟ್ಟಿಕೆಗಳಲ್ಲಿ ಸಂಗ್ರಹ ಮಾಡಿಕೊಂಡು ಪ್ರಸ್ತುತ ಪ್ರಬಂಧವನ್ನು ರಚಿಸಲಾಗಿದೆ.

**ಅ. ಛಾಯಾಚಿತ್ರ**

ಅದರ ಅಮೂಲ್ಯ ಕಲಾಕೃತಿಗಳನ್ನು ಛಾಯಾಗ್ರಹಣಕ್ಕಾಗಿ ಕಲಾವಿದರ ಸ್ವಗೃಹಕ್ಕೆ ಭೇಟಿ ನೀಡಿ ಸ್ವಗೃಹದಲ್ಲಿಯೇ ಕಲಾಕೃತಿಗಳನ್ನು ಛಾಯಾಚಿತ್ರಣ ಮಾಡಿಕೊಳ್ಳಲಾಯಿತು. ಅವುಗಳಲ್ಲಿ ರೇಖಾಚಿತ್ರಗಳು ಮತ್ತು ವರ್ಣಚಿತ್ರಗಳು. ವಿವಿಧ ಮಾಧ್ಯಮದ ಕಲಾಕೃತಿಗಳನ್ನು ಛಾಯಾಚಿತ್ರಣ ಮಾಡಿಕೊಂಡು ಗಣಕಯಂತ್ರದ ಮೂಲಕ ಅವುಗಳನ್ನು ಪುನರ್ ಮುದ್ರಿಸಿ ಮಾಧ್ಯಮವಾರು ವಿಷಯವಾರು ವಿಂಗಡಿಸಿಕೊಂಡು ಇಲ್ಲಿನ ಅಧ್ಯಾನಯಗಳಿಗೆ ಬಳಸಿಕೊಳ್ಳಲಾಗಿದೆ.

**೨. ಆನುಷಂಗಿಕ ಆಕರ ಸಾಮಾಗ್ರಿ**

ಪ್ರಬಂಧ ರಚಿಸುವಲ್ಲಿ ವಿಧಾನ ಅನುಷಂಗಿಕ ಆಕಾರ ಸಾಮಾಗ್ರಿಯಾಗಿದ್ದು, ಕೆಲವು ನೆಲೆಗಳಲ್ಲಿ ಆಳಾದ ಚಿತ್ರಗಳನ್ನು ಸ್ಥಳೀಯ ಕಲಾವಿದರು ಮರುಕೃತಿ ಮಾಡಿರುವುದನ್ನು ಅಧ್ಯಯನದ ಅವಶ್ಯಕತೆಗೆ ಬಳಸಿಕೊಳ್ಳಲಾಗಿದೆ. ದೇವಾಲಯದ ಪೂಜಾರಿಗಳು, ಸ್ಥಳೀಯ ಹಿರಿಯ ನಾರರೀಕರುಗಳ ಸಂದರ್ಶನವನ್ನು ಬಳಸಿಕೊಳ್ಳಲಾಗಿದೆ. ಇದುವರೆಗೆ ಕರ್ನಾಟಕದ ಜಿಲ್ಲೆಯ ದಶಾವತಾರದ ಚಿತ್ರಗಳ ಬಗ್ಗೆ ಬಂದ್ದಿರುವ ಲೇಖನಗಳು. ಗ್ರಂಥಗಳು, ಮಾಸಪತ್ರಿಕೆಗಳು ಹಾಗೂ ಗ್ರಂಥಾಲಯಗಳಲ್ಲಿ ಮಾಹಿತಿಯನ್ನು ಅಧ್ಯಯನಕ್ಕೆ ಆನುಷಂಗಿಕವಾಗಿ ಬಳಸಿಕೊಳ್ಳಲಾಗಿದೆ. ಇವು ದ್ವಿತೀಯ ಶ್ರೇಣಿಯ ಆಕರ 'ಸಾಮಾಗ್ರಿಗಳಾಗಿದ್ದು, ದಶಾವತಾರದ 'ಚಿತ್ರಗಳು ಬೇರೆ ಬೇರೆ ವ್ಯಕ್ತಿಗಳಿಂದ ಮಾಹಿತಿಗಳನ್ನು

ಸಂಗ್ರಹಿಸಿದೆ. ಸಂಪ್ರಬಂಧ ಹಾಗೂ ಗ್ರಂಥಗಳನ್ನು ಇಲ್ಲಿ ಅಧ್ಯಯನಕ್ಕೆ ಅವಶ್ಯಕತೆಯನ್ನು ಬಳಸಿಕೊಳ್ಳಬಹುದು.

## ಅಧ್ಯಯನದ ವ್ಯಾಪ್ತಿ

ಆಯ್ದುಕೊಂಡ ವಿಷಯದ ವ್ಯಾಪ್ತಿ ಬಹಳಷ್ಟು ವಿಶಾಲವಾಗಿದ್ದು ಅದು ಸಾಂಸ್ಕೃತಿಕ ಕರ್ನಾಟಕದ ಉತ್ತರದಲ್ಲಿ ರಾಷ್ಟ್ರಕೂಟರು, ಚಾಲುಕ್ಯರು, ದಕ್ಷಿಣದಲ್ಲಿ ವಿಜಯನಗರದ ಹಂಪಿ ಸಾಮ್ರಾಜ್ಯ ಮಧುರೆಯಲ್ಲಿ ಮೀರಿತ್ತು. ನಂತರ ವಿಜಯನಗರೋತ್ತರ ಮೈಸೂರು ಶೈಲಿಯಲ್ಲಿಯ ಇತಿಹಾಸ ಕಾಲದ ದಶಾವತಾರದ ಚಿತ್ರಗಳನ್ನು ಕಾಣಬಹುದು. ಅದು ಭಾರತೀಯರಲ್ಲಿ ಶ್ರೇಷ್ಠವಾದ ಧರ್ಮವಾಗಿದೆ. ಭಾರತದಾದ್ಯಂತ ಈ ಧರ್ಮದ ಚಿತ್ರ ಶಿಲ್ಪಗಳಿವೆ. ಅಧ್ಯಯನವು ಹಂಪಿಯ ವಿರೂಪಾಕ್ಷ ದೇವಾಲಯ, ಸೀಭಿಯ ಲಕ್ಷ್ಮೀ ನರಸಿಂಹ ದೇವಾಲಯವಾಗಿದ್ದು ಶಿರಾ ರೇವಣಸಿದ್ದೇಶ್ವರ ದೇವಾಲಯವು ಉದಾಹರಣೆ ಕೊಡುವುದಾದರೆ, ಲೇಪಾಕ್ಷಿ, ಕಾಳಹಸ್ತಿ, ಸೋಮಪಲ್ಲಿ, ತಾಡಪತ್ರಿ, ಬೆಪ್ಪಗಿರ, ಚಿದಂಬರಂ, ಕುಂಭಕೋಣಂ, ಶ್ರೀ ರಂಗಂ, ಮಧುರೈ, ಸೋಮಹಳ್ಳಿ ಹೊಳಲಗುಂಡಿ, ಆನೆಗೊಂದಿಯ ಹುಚ್ಚಪ್ಪಯ ಮಠ, ಕನಕಗಿರಿಯ ಕನಕಾಚಲಪತಿ ಹೀಗೆ ವಿಜಯನಗರ ಕಾಲ ದಶಾವತಾರದ ಚಿತ್ರಗಳನ್ನು ಕರ್ನಾಟಕದ ಅಥವಾ ಇನ್ನೊಳಿದ ವಿದೇಶ, ರಾಜ್ಯ ರಾಷ್ಟ್ರ, ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಮುಖ ದೇವಾಲಯದಲ್ಲಿ ಮಠಗಳಲ್ಲಿ, ಮಸೀದಿಗಳಲ್ಲಿ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

# ಅಧ್ಯಾಯ ೨

# ದಶಾವತಾರದ ಹಿನ್ನೆಲೆ ವಸ್ತು ವಿಷಯ

ಕರ್ನಾಟಕದಲ್ಲಿ ದಶಾವತಾರದ ಪರಿಕಲ್ಪನೆಯ ಚಿತ್ರ, ಶಿಲ್ಪಕಲೆಗಳು ತನ್ನದೇಯಾದ ಪುರಾತನ ಇತಿಹಾಸ ಹೊಂದಿದ್ದು, ಕರ್ನಾಟಕದ ದೃಶ್ಯಕಲೆ ನೆಲೆಯಲ್ಲಿ ಕಲ್ಯಾಣ ಚಾಲುಕ್ಯರು, ರಾಷ್ಟ್ರಕೂಟರು, ವಿಜಯನಗರ ಕಾಲ ಹಾಗೂ ಮೈಸೂರು ಕಾಲದ ಶೈಲಿಯವರೆಗೂ ತನ್ನ ದಶಾವತಾರ ಪರಿಕಲ್ಪನೆಯ ಚಿತ್ರಶಿಲ್ಪಗಳನ್ನು ತನ್ನದೇಯಾದ ಅನೇಕ ಶೈಲಿಗಳಲ್ಲಿ ಅನೇಕ ಮಾಧ್ಯಮಗಳಲ್ಲಿ ವಿವಿಧ ಪರಿಕರ ವಸ್ತು–ವಿಷಯಗಳ ಬದಲಾವಣೆಗಳೊಂದಿಗೆ ನಿರಂತರವಾದ ಬೆಳೆದು ಬಂದಿರುವುದನ್ನು ದೃಶ್ಯಕಲಾ ಇತಿಹಾಸದಿಂದ ತಿಳಿದುಕೊಳ್ಳಬಹುದು.

ಕ್ರಿ.ಪೂ. ೧೬ನೇ ಶತಮಾನದ ಸಂದರ್ಭದಲ್ಲಿ ರಚನೆಯಾದ ಹಂಪಿ ವಿರೂಪಾಕ್ಷ ದೇವಾಲಯದ ಮಹಾ ರಂಗಮಂಟಪದ ಒಳಮಾಳಿಗೆಯಲ್ಲಿರುವ ಭಿತ್ತಿ ಚಿತ್ರಗಳು ಆ ಕಾಲದ ಅತ್ಯಂತ ಪ್ರಮುಖ ಉದಾಹರಣೆಗಳಾಗಿವೆ. ವಿಜಯನಗರ ಕಾಲದಲ್ಲಿ ಅಂದರೆ ಕ್ರಿ.ಶ.೧೬ನೇ ಶತಮಾನದ ಮೊದಲೆರಡು ದಶಕಗಳಲ್ಲಿ ರಚನೆಯಾಗಿರಬಹುದಾದ ಈ ಚಿತ್ರಗಳು ಹಲವಾರು ಅಂಶಗಳಿಂದ ಅತ್ಯಂತ ಮುಖ್ಯವಾಗಿವೆ.[೧] ಚಿತ್ರಕಲಾ ಇತಿಹಾಸದ ದೃಷ್ಟಿಯಿಂದ ಈ ಚಿತ್ರಗಳು ವಿಜಯನಗರದ ಕಾಲದಲ್ಲಿ ರಚಿತವಾದ ಅಪೂರ್ವ ಐತಿಹಾಸಿಕ ದಾಖಲೆಗಳಾಗಿವೆ. ಪ್ರಸ್ತುತ ಅಧ್ಯಯನದಲ್ಲಿ ಈ ಚಿತ್ರಗಳನ್ನು ಕುರಿತಂತೆ ಹಲವಾರು ವಿದ್ವಾಂಸಕರು ಈಗಾಗಲೇ ಅಭ್ಯಾಸ ಮಾಡಿದ್ದಾರೆ. ಮತ್ತು ಇವುಗಳಲ್ಲಿ ರಚಿತವಾಗಿರುವ ಹಲವಾರು ವಸ್ತು ವಿಷಯಗಳನ್ನು ವಿಭಿನ್ನವಾಗಿ ತಮ್ಮದೇ ಆದ ದೃಷ್ಟಿಕೋನದಲ್ಲಿ ಗುರುತಿಸಿದ್ದಾರೆ.[೨]

೧. ಡಾ. ಯಾದಪ್ಪ ಪರದೇಶಿ, ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಪುಟ–೪.

೨. ಡಾ. ಅ.ಲ.ನರಸಿಂಹನ್, ಕರ್ನಾಟಕದ ಭಿತ್ತಿ ಚಿತ್ರಪರಂಪರೆ, ಪುಟ–೭೦.

ದಶಾವತಾರದ ಚಿತ್ರಗಳ ಕಾಲದ ಹಿನ್ನೆಲೆಯನ್ನು ಗಮನಿಸಿದಾಗ, ಪ್ರಾಚೀನ ಭಾರತದ ಭಿತ್ತಿ ಚಿತ್ರ ಪರಂಪರೆಯ ಮುಂದುವರೆದ ಶೈಲಿ ಅಥವಾ ಚಿತ್ರ ಪರಂಪರೆಯದು ಎನ್ನಬಹುದು. ಅಂಜತಾ (ಮಹಾರಾಷ್ಟ್ರ), ಬಾಗ್ (ಮಧ್ಯಪ್ರದೇಶ)ಗಳಲ್ಲಿರುವ ಬೌದ್ಧಲಯಗಳಲ್ಲಿನ ಭಿತ್ತಿ ಚಿತ್ರಗಳ ರಚನೆಯ ನಂತರ ಈ ಪರಂಪರೆ ಮುಂದುವರೆದುಕೊಂಡು ಬಂದದ್ದು ಬಾದಾಮಿ ಚಾಲುಕ್ಯರ ಕಾಲದಲ್ಲಿ ಬಾದಾಮಿಯ ವೈಷ್ಣದ ದೇವಾಲಯದಲ್ಲಿ ಮತ್ತು ಐಹೊಳೆಯ ರಾವಳಪಡಿ ದೇವಾಲಯದಲ್ಲಿ ಇಂದಿಗೂ ಒಳಮಾಳಿಗೆಯಲ್ಲಿ ಹಲವಾರು ದಶವಾತರದ ಚಿತ್ರಗಳು ಭಿತ್ತಿ ಚಿತ್ರಗಳು ಕಂಡುಬರುತ್ತವೆ.[೩] ಇತ್ತ ದಕ್ಷಿಣದಲ್ಲಿ ಪಲ್ಲವರ ಕಾಲದಲ್ಲಿನ ಕಾಂಚಿಪುರಂ, ಮತ್ತು ಚೋಳರ ಕಾಲದ ಸಿತ್ತನೆಯಾದ ಬಗ್ಗೆ ದಾಖಲೆಗಳಿವೆ ಮತ್ತು ಅವಶೇಷಗಳಿವೆ, ಆದರೆ ಕರ್ನಾಟಕದಲ್ಲಿ ವಿಶೇಷವಾಗಿ ಆ ಕಾಲದ ಚಿತ್ರಕಲೆಯ ಕುರಿತು ಹುಡುಕಾಟ ಮಾಡಿದಾಗ ನಮಗೆ ಅಷ್ಟು ತೃಪ್ತಿಕರವಾದ ಪುರಾವೆಗಳು ದೊರೆಯುವುದಿಲ್ಲ. ಬಹುಶಃ ಇದರಿಂದಲೇ ನಮ್ಮ ಹಲವು ವಿದ್ವಾಂಸರಿಗೆ ಹಂಪೆಯ ಚಿತ್ರಗಳ ಕಾಲದ ಬಗ್ಗೆ ಸಂಶಯಗಳು ಇರುವುದನ್ನು ಕಾಣುತ್ತೇವೆ.

ಚಿತ್ರಕಲಾ ಇತಿಹಾಸದ ದೃಷ್ಟಿಯಿಂದ ನಾವು ಈ ಚಿತ್ರಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈ ಚಿತ್ರಗಳ ಬಗ್ಗೆ ಇದುವರೆಗೂ ಆಗಿರುವ ಅಧ್ಯಯನಗಳು ಅಪೂರ್ಣವೆನಿಸುತ್ತವೆ. ಮಹಾರಂಗ ಮಂಟಪದಲ್ಲಿ ಚಿತ್ರಗಳು ಬೆಳವಣಿಗೆ ಹೊಂದಿರಬಹುದಾದ ರೀತಿ, ಚಿತ್ರಗಳ ಶೈಲಿ, ವರ್ಣ ವಿನ್ಯಾಸ, ಕಥಾ ಸಂಯೋಜನೆ, ಆಕೃತಿಗಳ ಸಂಯೋಜನೆ ಮತ್ತು ಭಾರತದ ಚಿತ್ರಗಳ ಸ್ಥಳದ ಬಳಕೆ ಹಾಗೂ ಇವುಗಳ ರಚನಾ ಕಾಲವನ್ನು ಒಂದೆಡೆ ಗಮನಿಸಿರುವುದು ಈ ಚಿತ್ರಗಳ ಕಾಲದಲ್ಲಿದ್ದ ಸಮಕಾಲೀನ ಚಿತ್ರ ಶೈಲಿಗಳೊಂದಿಗೆ ಇವುಗಳಿಗಿದ್ದರಬಹುದಾದ ಸಂಬಂಧ ಪ್ರಭಾವ ಅಥವಾ ಕೊಡು ಕೊಳ್ಳುವಿಕೆಯ ಕುರಿತು ವಿಮರ್ಶಾತ್ಮಕವಾಗಿ ನೋಡುವ ಪ್ರಯತ್ನವು ಅವಶ್ಯಕವಾಗಿ ಆಗಬೇಕಾಗಿದೆ.

ದಶಾವತಾರದ ಚಿತ್ರಗಳು ವಿಜಯನಗರದ ರಾಜ್ಯ ಸ್ಥಾಪನೆಯಾದ ಸಮಯದಲ್ಲಿ ಮತ್ತು ಆ ಕಾಲಕ್ಕಿಂತಲೂ ಮೊದಲು ಅಂದರೆ ಬಾದಾಮಿ ಚಾಲುಕ್ಯ ನಂತರದ ಕಾಲದಲ್ಲಿ ಹಾಗೂ ಇಂದಿನ ಕರ್ನಾಟಕಕ್ಕೆ ಸೀಮಿತವಾದಂತೆ ಹೆಚ್ಚಿನ ಪ್ರೋತ್ಸಾಹ ವಾಸ್ತು ಮತ್ತು ಶಿಲ್ಪಕಲೆಗೆ ದೊರೆತಿತ್ತು ಎಂಬ ಅಂಶವನ್ನು ನಾವು ವಿಶೇಷವಾಗಿ ಗಮನಿಸಬೇಕು ಈ ಕಾಲಗಳಲ್ಲಿ ಚಿತ್ರಕಲೆ ಪ್ರಚಲಿತತೆಯ ಬಗ್ಗೆ ನಮಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಈ ಕಾಲದಲ್ಲಿ ಚಿತ್ರಕಲೆಯ ಅಂಗವಾಗಿ ಪ್ರಾರಂಭವಾದ ವಿಜಯನಗರದ ಕಾಲದಲ್ಲಿಯೇ ಎಂದು ಹೇಳಬಹುದು.

---

೩. ಡಾ. ಅ.ಲ.ನರಸಿಂಹನ್, ಕ.ವಿ.ವಿಶ್ವಕೋಶ, ಪುಟ.೧೦೬.

ದೇವಾಲಯಗಳ ಗೋಡೆಗಳ ಮೇಲೆ ಒಳಮಾಳಿಗೆಯ ಮೇಲೆ ಹಾಗೂ ಅಂದಿನ ಅರಮನೆಗಳಲ್ಲಿ ಚಿತ್ರಗಳು ರಚನೆಯಾದ ಬಗ್ಗೆ ಅವುಗಳ ವರ್ಣ ಸಂಯೋಜನೆಯ ಬಗ್ಗೆ ತಿಳಿದುಬರುತ್ತದೆ.

ಒಟ್ಟಾರೆ ಧರ್ಮದ ಚೌಕಟ್ಟನ್ನು ಹಾಕಿಕೊಂಡಾಗ ಧಾರ್ಮಿಕ ಆಚರಣೆಗಳು ಕಲೆಯ ರೂಪ ತಾಳುವುದನ್ನು ನೋಡುತ್ತೇವೆ. ಎಷ್ಟೋ ಸಲ ಹಿಂದಿನಿಂದ ಬಂದಿದೆ. ಅದನ್ನು ಬಿಡಲಾರದೆಂದು ಆಚರಿಸುವ ಅನೇಕ ಹಬ್ಬ ಆಚರಣೆಗಳು ನಮ್ಮ ಕಣ್ಮುಂದೆ ಕಾಣುತ್ತವೆ. ಈ ದಶಾವತಾರದ ಚಿತ್ರಗಳ ಸಂಪ್ರದಾಯಗಳ ಪ್ರಭಾವಕ್ಕೆ ನೆಲುಕಿ. ದೇವರ ಆರಾಧನೆಗೆ ತೊಡಗಿ ದೇವರನ್ನು ಸ್ತುತಿಸಲು ನಲಿಸುವ ದೇವರ ಕಣ್ಣಿಗೆ ಹಬ್ಬ ಮಾಡಲು ಸಾಹಿತ್ಯ ನೃತ್ಯ ಅಲಂಕಾರದಂತಹ ಕಲೆಗಳು ಹುಟ್ಟಿಬಂದವು. ಕಲೆಯ ಉಗಮವನ್ನು ಧಾರ್ಮಿಕ ಆಚರಣೆಯ ಹಿನ್ನೆಲೆಯಲ್ಲಿ ದೈವದ ಆರಾಧನೆಯ ಹಿನ್ನೆಲೆಯಲ್ಲಿ ಪರಿಗಣಿಸಬೇಕಾಗುತ್ತದೆ. ಹೀಗೆ ಪ್ರತಿಯೊಂದು ಆಚರಣೆಗೆ ಒಂದೊಂದು ಪ್ರತಿರೂಪವನ್ನು ಸೃಷ್ಟಿಸುವುದು ಜನಪದ ವೈಶಿಷ್ಟವಾಗಿದೆ. ಹಾಗೆಯೇ ಆಯಾ ಧರ್ಮದಲ್ಲಿ ವಿಶೇಷವಾದ ಮೂರ್ತಿ ಅಥವಾ ಚಿತ್ರಪಟಗಳನ್ನು ಸೂಜಿಸುವುದು ಆರಾಧನೆಯ ಸಂಕೇತವಾಗಿದೆ. ಇದಕ್ಕೆ ಪ್ರತೀಕವಾಗಿ ಅನೇಕ ಧರ್ಮಗಳು ಉದಯಿಸಿವೆ. ಪ್ರಧಾನವಾಗಿ ನಾಗರೀಕತೆಯ ಕಾಲದಿಂದಲೂ ಇಲ್ಲಿ ವೈಷ್ಣವ, ಭೌದ್ಧ, ಜೈನ, ಶೈವ ಇನ್ನಿತರ ಧರ್ಮಗಳು ಅಸ್ಥಿತ್ವದಲ್ಲಿದ್ದು ಕಲೆ ಮತ್ತಿತರ ಸಂಗತಿಗಳನ್ನು ತಮ್ಮ ಅಸ್ತಿತ್ವವನ್ನು ಸಾಬೀತುಪಡಿಸಿವೆ. ಕಲೆಯ ಒಂದು ಪ್ರಕಾರವೇ ಆಗಿರುವ ಭಿತ್ತಿ ಚಿತ್ರಕಲೆಯಲ್ಲಿಯೂ ಮೇಲಿನ ಸಂಗತಿಗಳು ಪುರಾವೆಗಳಾಗಿ ಕಾಣಸಿಗುತ್ತವೆ.[೪]

ದಶಾವತಾರದಲ್ಲಿ ಬುದ್ದನ ಭಿತ್ತಿ ಚಿತ್ರ ಕರ್ನಾಟಕದಲ್ಲಿ ಮೊದಲ ಬಾರಿಗೆ ಹಂಪೆಯ ವಿರೂಪಾಕ್ಷ ದೇವಾಲಯದಲ್ಲಿ ಕಂಡುಬರುತ್ತದೆ. ಅದು ತ್ರಿಪುರ ಸಂಹಾರದಲ್ಲಿ ವಿಷ್ಣು (ಬುದ್ಧ) ಮರದ ಮುಂದೆ ನಿಂತಿರುವಂತೆ ಇಲ್ಲಿಯೂ ದಶಾವತಾರಗಳಲ್ಲಿ ಒಂಬತ್ತನೆಯದಾಗಿ ಚಿತ್ರಿಸಿದೆ. ಉಳಿದಂತೆ ತುಮಕೂರು ಬಳಿಯ ಮುಂಚುಕಲ್ಲು, ಗೊಲ್ಲಹಳ್ಳಿ, ಕೊಳ್ಳೆಗಾಲದ ಮುಂಟಪ ಇತ್ಯಾದಿ ಕೆಲವು ಕಡೆಗಳಲ್ಲಿ 'ಭೌದ್ಧವತಾರ"ದ ಚಿತ್ರಗಳನ್ನು ಕಾಣಬಹುದು. ದಶಾವತಾರದಲ್ಲಿ ಬುದ್ದನಿಗೂ ಒಂದು ಸ್ಥಾನ ಸಿಕ್ಕಿದ್ದು. ನಗ್ನ ರೂಪನಲ್ಲಾದರೂ ಆತನನ್ನು ಇನ್ನೊಮ್ಮೆ ಕಾಣಲು ಅವಕಾಶವಾಯಿತ್ತು ಅದರಲ್ಲೂ ಎರಡು ಪ್ರಬೇಧಗಳಿವೆಯಾದರೂ ಬಲರಾಮನಿಗಿಂತ ಬುದ್ಧನನ್ನೆ ಪ್ರಚುರ ಪಡಿಸಿರುವುದು ಶಿಲ್ಪಗಳಲ್ಲಿ ಚಿತ್ರಕಲೆ ಅಧಿಕವಾಗಿ ಕಂಡು ಬರುತ್ತದೆ.[೫] ಪ್ರಭೇಧಗಳು ಪ್ರಾದೇಶಿಕ ಭಿನ್ನತೆಗಿಂತ ವೈಷ್ಣವರ ಒಂದು ಉಪಜಾತಿಯ ಭಿನ್ನತೆಯಾಗಿ ಕಂಡು ಬರುತ್ತದೆ.

೪. ಸುಚಿತ್ರಾ ಗ. ಲಿಂಗದಳ್ಳಿ, ವಿಜಯನಗರ ಭಿತ್ತಿಚಿತ್ರಕಲೆ, ಪುಟ. ೩೨.

೫. ಕಾಂತರಾಜ ಸಿ.ಎಸ್., ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಕಲೆ, ಪುಟ.೧೩.

ಕೈಬಿಡು ಬುದ್ಧನನ್ನೇ ಒಪ್ಪಿಕೊಂಡಿದಾಗಿ. ದಶಾವತಾರಗಳಲ್ಲಿ ಈ ಪ್ರಭೇದಗಳನ್ನು (ಹರಿವಂಶದಲ್ಲಿ ಈ ಎರಡರ ಬದಲು ದತ್ತಾತ್ರೇಯ ಇರುವುದು ಇನ್ನೊಂದು ಪ್ರಬೇಧ ಆಗುತ್ತದೆ.) ವ್ಯಾಪಕವಾಗಿ ಗುರುತಿಸಬಹುದು.

ಆದರೆ ಕರ್ನಾಟಕದ ಹೆರಗೆಲೇಪಾಕ್ಷಿ, ಚಿದಂಬರಂ, ಇತ್ಯಾದಿಗಳಲ್ಲಿ ಹಲವಾರು ಅಂಕಣಗಳಲ್ಲಿ ಶಿವಪುರಾಣದ ಕಥೆ ಹೇಳಿರುವುದು ಕಂಡುಬರುತ್ತದೆ. ಶಿವನ ಪಂಚವಿಂಶಲೆ ಲೀಲೆಗಳನ್ನು ಹೇಳುವಾಗ ಒಂದೇ ಅಂಕಣವನ್ನು ಇಪ್ಪತ್ತೊಂದು ಉಪ ವಿಭಾಗಗಳಾಗಿಸಿ ಒಂದೊಂದೇ ದೃಶ್ಯದಲ್ಲಿ ಹೇಳಿ ಮುಗಿಸಿಬಿಡುತ್ತಾನೆ. ಆನೆಯ ಒಡಲನ್ನು ಸೀಳಿ ಹೊರಬರುತ್ತಿರುವ ಶಿವ ಗಜಾಸುರ ಮರ್ದನ ಎಂಬಂತೆ ಮಾರ್ಕೆಂಡೇಯ ಬೇಡರ ಕಣ್ಣಪ್ಪ ಇತ್ಯಾದಿಗಳನ್ನು ಚಿತ್ರಿಸಿರುವುದು ಕಾಣಬಹುದು. ದಶಾವತಾರಗಳನ್ನು ಇದೇ ರೀತಿ ಹತ್ತು ಅಂಕಣಗಳಲ್ಲಿ ಮುಗಿಸುವುದು ಪದ್ಧತಿ. ಪಂಚವಿಂಶತಿಯ ಅಂಕಣಗಳನ್ನು ಹಂಪಿ, ಸಿಭಿ ಹಾಗೂ ಕರೆಗೊಂಡು ರಂಗಾಪುರಗಳಲ್ಲಿ ಕಾಣಬಹುದು. ಹಂಪೆಯಲ್ಲಿ ತ್ರಿಪುರದ ವೃತ್ತವೊಂದರಲ್ಲಿ ನಗ್ನವಾಗಿ ವಿಷ್ಣು ನಿಂತಿರುವುದು ಎರಡು ಬದಿಗೆ ಹೆಂಗಳೆಯರಿಬ್ಬರು ಕುತೂಹಲದಿಂದ ಕೈಯೆತ್ತಿ ನಿಂತಂತಿರುವುದು. ಉಳದೆರಡು ಕಂಗಾಪುರದಲ್ಲಿ ಯುದ್ಧದ ಅಂಕಣದ ಪಕ್ಕದಲ್ಲಿ ತೊಲೆ ಕಂಬವಿದ್ದು ಅವುಗಳ ನಗ್ನವಾಗಿನಿಂತಿರುವುದು ಇತ್ಯಾದಿ ಕಥೆ ಸಂದರ್ಭ ಚಿತ್ರಿಸಿದ್ದು, ಅಮ್ಮಿನಭಾವಿಯ ಹಿರೇಮಠದಲ್ಲಿ ಉಳಿದ ಯಾವುದೇ ವಿವರಗಳು ಅಲ್ಲದೆ ರಥಾರೂಢವಾದ ಶಿವ ಹಾಗೂ ತ್ರಿಪುರಗಳನ್ನು ಸೂಚಿಸುವಂತೆ ಮೂರು ವೃತ್ತಗಳಲ್ಲಿ ಮೂವರು ರಾಕ್ಷಸರನ್ನು ಚಿತ್ರಿಸಿದ್ದು ಕಾಣಬಹದು.

ದಕ್ಷಿಣ ಭಾರತದ ವಿಷ್ಣುವಿನ ಅವತಾರದ ವರಾಹ, ನರಸಿಂಹ, ರಾಜಕೃಷ್ಣರಿಗೆ ವಿಶೇಷ ಪ್ರಾಮುಖ್ಯತೆ ಬಂದಿದ್ದು ಅವರ ಪರವಾದ ಆಲಯಗಳು ಹಾಗೂ ಚಿತ್ರಕಲೆಯನ್ನು ಕಾಣಬಹುದು. ಶ್ರೀರಂಗರಲ್ಲಿ, ಹೊಯ್ಸಳ ಕಾಲದ ಕೃಷ್ಣ ದೇವಾಲಯದಲ್ಲಿ ಕೆಲವು ಚಿತ್ರಗಳಿದ್ದು ಅವು ಹೊಯ್ಸಳರ ಕಾಲದ ರಚನೆಗಳು ಎಂದು ತಿಳಿಯಲಾಗಿದೆ. ಅಲ್ಲದೆ ಇಡೀ ದೇವಾಲಯದ ಸಂಕೀರ್ಣದಲ್ಲಿ ಅಲ್ಲಲ್ಲಿ ವೈಷ್ಣವಪರವಾದ ಕಥಾನಕಗಳ ಚಿತ್ರಗಳಿದ್ದು ವಿಜಯನಗರ ಕಾಲದಲ್ಲಿ ರಚಿತವಾದಂತಹವು. ಇದೇ ಕಾಲದ ಹಂಪೆಯ ವಿರೂಪಾಕ್ಷ ದೇವಾಲಯದಲ್ಲಿರುವ ಚಿತ್ರಗಳಲ್ಲಿ ರಾಮಾಯಣ ಮತ್ತು ಮಹಾಭಾರತದ ಕೆಲವು ದೃಶ್ಯಗಳಲ್ಲದೆ ದಶಾವತಾರ ಹಾಗೂ ಲೀಲೆಗಳಿಗೆ ಸಂಬಂಧಿಸಿದ ಚಿತ್ರಗಳನ್ನು ಕಾಣುತ್ತೇವೆ.

ವಿಜಯನಗರದ ಅವನತಿಯ ನಂತರದ ಕಲೆಯನ್ನು ಆಶ್ರಯ ನೀಡಿದ ಮೈಸೂರಿನ ರಾಜರು ಅವರ ಕಲಾ ಪ್ರೋತ್ಸಾಹವನ್ನು ತಮ್ಮ ಆಡಳಿತ ಭೂ ಪ್ರದೇಶದಲ್ಲಿ ಮುಂದುವರಿಸಿರುವುದಕ್ಕೆ ಅನೇಕ ನಿದರ್ಶನಗಳಿವೆ. ಮೈಸೂರು ಪ್ರಾಂತ್ಯಕ್ಕೆ ಸೇರಿದ ತುಮಕೂರು ಜಿಲ್ಲಾದ್ಯಾಂತ ಮೈಸೂರು ಅರಸರ ಕಾಲ ಭಿತ್ತಿ ವರ್ಣಚಿತ್ರಗಳನ್ನು ಗುರುತಿಸಲಾಗಿದೆ. ಈಗಾಗಾಲೇ ಪಟ್ಟಿ ಮಾಡಿರುವಂತೆ

ತುಮಕೂರು ತಾಲ್ಲೂಕಿನ ಸಿಬಿ, ತಿಪಟೂರು ತಾಲ್ಲೂಕಿನ ಕೆರಗೋಡಿ ಮತ್ತು ರಂಗಾಪುರ, ತರುವಕೆರ ತಾಲ್ಲೂಕಿನ ಬೆನಕನಕೆರೆ ಇಲ್ಲಿನ ದೇವಾಲಯಗಳ ಭಿತ್ತಿಗಳಲ್ಲಿ ವೈಷ್ಣಧರ್ಮಾಧಾರಿತ ಚಿತ್ರಗಳನ್ನು ಚಿತಿಸಿದ್ದು ಕಾಣಬಹುದಾಗಿದೆ.

ಸಿಬಿ ದೇವಾಲಯದ ಮುಖಮಂಟಪದ ಮೇಲ್ಛಾವಣೆ, ಮಹಾದ್ವಾರದ ಮೇಲ್ಛಾವಣಿ ಮತ್ತು ದೂರಗಳ ಮೇಲೆಲ್ಲಾ ಚಿತ್ರಗಳಿವೆ. ಇಲ್ಲಿನ ಮುಖಮಂಟಪದ ಮೇಲ್ಛಾವಣೆಯ ಒಂಭತ್ತು ಅಂಕಣಗಳಲ್ಲಿ ಪ್ರಮುಖವಾಗಿ ಎಂಟು ಅಂಕಣಗಳು ವೈಷ್ಣವ ಧರ್ಮದ ಹಿನ್ನಲೆಯ ಚಿತ್ರಗಳಿಗೆ ಮೀಸಲಾಗಿರಿಸಲಾಗಿದೆ. ಈ ಚಿತ್ರಗಳಲ್ಲಿ ಭಾಗವತ ಪುರಾಣ, ಮಹಾಭಾರತ, ರಾಮಾಯಣ, ಬಾಲಖಂಡ ರಾಮಾಯಣ, ಅರಣ್ಯ-ಖಂಡ, ರಾಮಾರ್ಯ ಯುದ್ಧಖಂಡ, ನರಸಿಂಹ ಪುರಾಣ, ವಿಷ್ಣು ದಶಾವತಾರ ಮುಂತಾದ ಕಥಾನಕ ದೃಶ್ಯಗಳನ್ನು ಚಿತ್ರಿಸಲಾಗಿದೆ. ಗರ್ಭಗುಡಿಯ ಪ್ರವೇಶ ದ್ವಾರದ ಎದುರು ಮುಖದ ತೊಲೆಯಲ್ಲಿ ವಿಷ್ಣುವಿನ ಅನಂತ ಶಯನ ಕಥಾನಕ ದೃಶ್ಯವನ್ನು ಚಿತ್ರಿಸಲಾಗಿದೆ.

ಏಳನೇ ಅಂಕಣವು ನರಸಿಂಹ ಪುರಾಣದ ವಸ್ತು ವಿಷಯವನ್ನು ಒಳಗೊಂಡಿದೆ. ಈ ಅಂಕಣವು ಸಂಪೂರ್ಣವಾಗಿ ನರಸಿಂಹ ಲಕ್ಷ್ಮಿಯೊಂದಿಗೆ ಅವನ ವಿವಾಹ ಸಂದರ್ಭದ ಚಿತ್ರಣವಾಗಿದೆ. ಇದೇ ಕಥಾವಸ್ತುವನ್ನು ಒಳಗೊಂಡಂತೆ ನರಸಿಂಹನ ವಿವಿಧ ಅವತಾರದ ನಮೂನೆಗಳನ್ನು ಇಲ್ಲಿ ಪ್ರತಿನಿಧಿಸಲಾಗಿದೆ. ಉದಾಹರಣೆಗೆ ಲಕ್ಷ್ಮಿ ನರಸಿಂಹ ಶೇಷಾಸನದ ಮೇಲೆ ಆಸೀನನಾಗಿರುವ ಯೋಗ ನರಸಿಂಹ, ವರಹಾ ನರಸಿಂಹನು ಹಾಗೂ ದಶಬುಜು ನರಸಿಂಹ ಅವತಾರಗಳ ಚಿತ್ರಣವಿದೆ. ಮಧ್ಯದ ಅಂಕಣವು ಅತಿ ಎಚ್ಚರಿಕೆಯಿಂದ ರೂಪಿಸಲಾಗಿದೆ. ಅಲಂಕಾರ ಚಿತ್ರಣದ ಮೂರು ಕಮಾನುಗಳ ಮಧ್ಯಭಾಗದಲ್ಲಿ ನರಸಿಂಹನು ಹಾಸೀನನಾಗಿದ್ದಾನೆ. ದೇವತೆಯು ಚತುರ್ಭುಜದೊಂದಿಗೆ ಚಿತ್ರಿಸಿದೆ. ಮೇಲ್ಮುಖವಾದ ಎರಡು ಕೈಗಳು ಶಂಕ ಮತ್ತು ಚಕ್ರಗಳನ್ನು ಹೊಂದಿದೆ. ಕೆಳಮುಖವಾಗಿ ಇಳಿಬಿಟ್ಟಿರುವ ಬಲಕೈ ವರದಾ ಮುದ್ರಾಕಾರದಲ್ಲಿದೆ. ಎಡಗೈ ಲಕ್ಷ್ಮಿಯನ್ನು ಆಲಂಗಿಸಿದೆ. ನರಸಿಂಹನಿಗೆ ವಿಪುಲವಾದ ದುಂಡು ಕಣ್ಣುಗಳಿದ್ದು ಮುಖದಲ್ಲಿ ಮಂದಹಾಸವಿದೆ. ಶ್ರೇಷ್ಠವಾದ ಆಭರಣಗಳನ್ನು ಧರಿಸಿದ್ದಾನೆ. ಅಷ್ಟೇ ಅಲಂಕೃತಳಾದ ಲಕ್ಷ್ಮಿಯು ಆಸೀನಳಾಗಿರುವ ಸಂಯೋಜನೆಯು ಉತ್ತಮವಾಗಿ ಚಿತ್ರಿಸಲಾಗಿದೆ. ಅವಳ ಬಲಗೈ ಕಮಲವನ್ನು ಹಿಡಿದಿದೆ. ಇನ್ನೊಂದು ಪಕ್ಕದಲ್ಲಿ ಶ್ರೀದೇವಿ ಮತ್ತು ಭೂದೇವಿಯರು ನರಸಿಂಹನನ್ನು ನೋಡುತ್ತಿರುವಂತೆ ಚಿತ್ರಿಸಲಾಗಿದೆ. ನರಸಿಂಹನ ಬಲಭಾಗದಲ್ಲಿ ಬ್ರಹ್ಮದೇವನನ್ನು,

ಎಂಟನೇ ಅಂಕಣವು ಚೌಕಕಾರವಾಗಿದ್ದು ವಿಷ್ಣು ಪುರಾಣದ ಕಥಾವಸ್ತುವನ್ನು ಆಧರಿಸಿದೆ. ಚೌಕಕಾರದ ಅಂಕಣವನ್ನು ಪೂರ್ಣ ಪ್ರಮಾಣದಲ್ಲಿ ಆವರಿಸಿರುವಂತೆ ವಿಷ್ಣುವಿನ ವಿಶ್ವರೂಪವನ್ನು

ಚಿತ್ರೀಕರಿಸಲಾಗಿದೆ. ಉಳಿದ ಸ್ಥಳಾವಾಕಾಶವನ್ನು ಸುಮಾರು ಇಪ್ಪತ್ತು ಸಣ್ಣ ಚೌಕಟ್ಟುಗಳನ್ನು ವಿಂಗಡಿಸಿಕೊಂಡು ವಿಶ್ವರೂಪದ ವಿವಿಧ ಅವತಾರಗಳನ್ನು ಒಂದೊಂದು ಚೌಕಟ್ಟಿನಲ್ಲಿ ಬಿಡಿಸಲಾಗಿದೆ. ಇಲ್ಲಿರುವ ಇಡೀ ದೇವಾಲಯದಲ್ಲಿರುವ ವರ್ಣ ಚಿತ್ರಗಳಿಗಿಂತ ಶ್ರೇಷ್ಠ ಮಟ್ಟದಲ್ಲಿ ಇಲ್ಲಿನ ಸನ್ನಿವೇಶವು ಶೈಲಿ ತಂತ್ರಗಳಲ್ಲಿ ಭಿನ್ನವಾಗಿದೆ. ವಿಷ್ಣುವು ಚತುರ್ಭುಜ ಭೂಷಿತನಾಗಿ ನಿಲ್ಲಿಸಿರುವಂತೆ ಚಿತ್ರಿಸಲಾಗಿದೆ. ಮೇಲ್ಮುಖವಾಗಿರುವ ಎರಡೂ ಶಂಕ ಚಕ್ರಗಳಿದ್ದರೆ, ಕೆಳಮುಖವಾಗಿರುವ ಎರಡು ಕೈಗಳು ವರದ ಅಭಯ ಮುದ್ರಾಕಾರದಲ್ಲಿವೆ. ವಿಷ್ಣುವಿನ ಈ ದೃಶ್ಯವು ಸಾಮಭಂಗದಲ್ಲಿದೆ ವಿಷ್ಣುವಿನ ದೇಹದ ಮಧ್ಯಭಾಗದಲ್ಲಿ ಏಳು ವೃತ್ತಗಳು ಚಿತ್ರಿಸಲ್ಪಟ್ಟಿದ್ದು ಇಡೀ ಜಗತ್ತು ತನ್ನ ಅಧೀನ ಎಂಬುದನ್ನು ಪ್ರತಿನಿಧಿಸುತ್ತದೆ. ವಿಷ್ಣುವಿನ ಎಡ ಮತ್ತು ಬಲಭಾಗದಲ್ಲಿ ನಾರದ, ತುಂಬುರ, ವಿಭಿನ್ನ ಮಾದರಿಯಲ್ಲಿ ನಿಂತಿರುವಂತೆ ಋಷಿಮುನಿಗಳು, ಋಷಿಗಳು, ರಾಕ್ಷಸರು, ಪರಿಚಾರಕರು, ಮತ್ತು ಇತರೆ ದೇವತೆಗಳನ್ನು ಚಿತ್ರಿಸಿದೆ. ವಿಷ್ಣುವಿನ ಈ ಪ್ರಧಾನ ಚಿತ್ರದ ಸುತ್ತಲೂ ಭಿನ್ನ ನಮೂನೆಯಲ್ಲಿರುವ ವಿಷ್ಣುವಿನ ವಿವಿಧ ರೂಪಗಳನ್ನು ಬಿಡಿಸಲಾಗಿದೆ. ಮೊದಲಿಗೆ ಮೋಹಿಸಿಯ ಜೊತೆಯಲ್ಲಿ ನೃತ್ತಿಸುತ್ತಿರುವ ದೇವತೆ. ಶ್ರೀನಿವಾಸ, ನಾರಾಯಣ, ಪಾಂಡುರಂಗ, ವರಹಾಸ್ವಾಮಿ, ಗೋಪಿಕೆಯರೊಂದಿಗಿರುವ ಕೃಷ್ಣ, ತ್ರಿವಿಕ್ರಮ, ಗಜೇಂದ್ರ ಮೋಕ್ಷ, ವಟಪುತ್ರಸಾಯಿ, ಕೂರ್ಮ ಅವತಾರ, ಮತ್ಸ್ಯ ಅವತಾರ, ಸಮುದ್ರಮಥನ, ನರಸಿಂಹ, ರಾಮ, ವಾಮನ ಮತ್ತು ಬಲರಾಮನ ಚಿತ್ರಗಳು ಅಲಂಕಾರಿಕೆ ಸಣ್ಣ ಚೌಕಟ್ಟುಗಳೊಳಗೆ ಚಿತ್ರಿಸಲ್ಪಟ್ಟಿವೆ.

ಮೈಸೂರು ಅರಸರ ಆಳ್ವಿಕೆಯ ಕಾಲದಲ್ಲಿ ಪ್ರಚಲಿತವಿದ್ದ ಕೇಶ ವಿನ್ಯಾಸವನ್ನು ಇಲ್ಲಿನ ಚಿತ್ರಗಳಲ್ಲಿ ಗುರುತಿಸಬಹುದು. ಮಹಿಳೆಯರ ಕಣ್ಣುಗಳು ಕಿವಿ ಭಾಗದವರೆಗೆ ಚಾಚಿರುವಂತೆ ಚಿತ್ರಿಸಿರುವಿಕೆ ಮುಖ ಮೈ ಚರ್ಮದ ಬಣ್ಣವನ್ನು ತಿಳಿಗೆಂಪು, ಕಂದುಬಣ್ಣ, ತಿಳಿಕಂದುಬಣ್ಣ, ಬಿಳಿ ಮತ್ತು ನೀಲಿ ಲೇಪಿತವಾಗಿದೆ. ಸಾಮಾನ್ಯವಾಗಿ ವಿಷ್ಣು ಮತ್ತು ಕೃಷ್ಣ ಆಕಾಶನೀಲಿ ಬಣದಲ್ಲಿ ಚಿತ್ರಿಸಿವೆ. ಇವರು ಸಾಮನ್ಯವಾಗಿ ವಿರಾಜರಮಾನ ಸಮಸ್ಥಿತಿಯ ಸನ್ನಿವೇಶದಲ್ಲಿರುವಂತೆ ರೂಪಿಸಲ್ಪಟ್ಟಿವೆ. ಸಾಮಾನ್ಯವಾಗಿ ವೈಷ್ಣವ ಧರ್ಮೀಯರು ಅನುಸರಿಸುವಂತೆ ತುರುಬುಗಳು ಮೇಲೆತ್ತಿ ಗಂಟುಮಾಡಿ ಉಳಿದ ಕೇಶವನ್ನು ಇಳೆಬಿಟ್ಟಿರುವಂತೆ ಚಿತ್ರಿಸಿದೆ. ಆಭರಣಗಳ ಮತ್ತು ವಸ್ತ್ರಗಳು ದೇವದ ಅಲಂಕಾರದಲ್ಲಿ ಪಾತ್ರವಹಿಸಿವೆ. ಬಿಳಿಬಣ್ಣವು ಪಾರದರ್ಶಕ ದಾವಣಿಗಳಿಂದ ಅಲಂಕರಿಸಲಾಗಿದೆ. ಗಲ್ಲ, ಮೂಗು, ತುಟಿ, ಕಿವಿಭಾಗ ಕಾಣಿಸಲು ಬಾಹ್ಯರೇಖೆಗಳನ್ನು ಒತ್ತಾಗಿ ಎಳೆಯಲಾಗಿದೆ. ಇವೆಲ್ಲ ಪ್ರಚಲಿತವಿದ್ದ ಮೈಸೂರು ಶೈಲಿಯ ಲಕ್ಷಣಗಳನ್ನು ಹೋಲುತ್ತವೆ.

ಕೆರೆಗೋಡಿನ ಶಂಕರೇಶ್ವರ ದೇವಾಲಯದ ಭಿತ್ತಿಚಿತ್ರಗಳು ಅತಿಹೆಚ್ಚಾಗಿದ್ದು ಕೆಲವೇ ಚೌಕಟ್ಟುಗಳಲ್ಲಿ ವೈಷ್ಣವ ಧರ್ಮದ ಭಿತ್ತಿ ಚಿತ್ರಗಳಿವೆ. ಸಾಮಾನ್ಯವಾಗಿ ವೈಷ್ಣವ ಧರ್ಮದ ಕಥಾವಸ್ತುವು ಒಂದೇ ಆಗಿರುವುದರಿಂದ ಚಿತ್ರಗಳ ಚಿತ್ರಣ ಕ್ರಮವೇನು ಬೇರೆಯಾಗಿಲ್ಲ ಸೀತಾರಾಮ

ಕಲ್ಯಾಣ, ರಾಮಪಟ್ಟಾಭಿಷೇಕದ ದೃಶ್ಯಗಳನ್ನು ದೊಡ್ಡದಾಗಿ ರಚಿಸಿದ್ದು ಸುತ್ತಲಿನ ಚಿಕ್ಕ ಅಂಕಣಗಳಲ್ಲಿ ವಿಶ್ವಾಮಿತ್ರನಲ್ಲಿ ರಾಮಲಕ್ಷ್ಮಣರ ಅಭ್ಯಾಸ, ಅಹಲ್ಯೋದ್ಧಾರ, ಸೀತಾಪರಹರಣ, ವಾಲಿನಿಗ್ರಹಣ, ಜಟಾಯು, ರಾಮರಾವಣರಯುದ್ಧ, ಅಶೋಕವನದಲ್ಲಿ ಸೀತೆ ಇತ್ಯಾದಿ ಚಿತ್ರಗಳಿವೆ. ಮತ್ತೊಂದೆಡೆ ಶ್ರೀದೇವಿ, ಭೂದೇವಿ ಸಮೇತ ವಿಷ್ಣುವಿದ್ದು. ಸುತ್ತಲಿನ ಅಂಕಣಗಳಲ್ಲಿ ದಶಾವತಾರವನ್ನು ಚಿತ್ರಿಸಿದೆ. ಇಲ್ಲಿನ ಶೈಲಿ ಮೈಸೂರು ಶೈಲಿಯದಾಗಿರದೆ ಜನಪದ ಶೈಲಿಗೆ ಸ್ಥಿತ್ಯಂತರಗೊಂಡಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದು.

ಕೆರೆಗೋಡಿಗೆ ಹತ್ತಿರದಲ್ಲೇ ಇರುವ ರಂಗಾಪುರದಲ್ಲಿಯೂ ವಿಷ್ಣುವಿನ ಕಲ್ಯಾಣದ ದೃಶ್ಯಗಳು ದಶಾವತಾರದ ಚಿತ್ರಗಳನ್ನು ಕಾಣಬಹುದಾಗಿದೆ. ದೇವಾಲಯದಲ್ಲಿ ಒಂದೇ ಅಂಕಣದಲ್ಲಿ ಚಿತ್ರವಿದ್ದು ವಿಷ್ಣುವಿನ ದಶಾವತಾರ ಚಿತ್ರಕ್ಕೆ ಈ ಅಂಕಣವನ್ನು ಮೀಸಲಿಟ್ಟಿದ್ದಾರೆ. ಈ ಅಂಕಣದ ಮಧ್ಯಭಾಗದಲ್ಲಿ ಚನ್ನಕೇಶವನ ಜೊತೆ ಶ್ರೀದೇವಿ ಭೂ ದೇವಿಯರ ಚಿತ್ರವನ್ನು ಪ್ರಧಾನವಾಗಿ ಚಿತ್ರಿಸಿದ್ದು, ಈ ಚಿತ್ರದ ಸುತ್ತಲಿನ ಸ್ಥಳವನ್ನು ವಿಷ್ಣುವಿನ ದಶಾವತಾರವನ್ನು ಚಿಕ್ಕ ಚಿಕ್ಕ ಅಂಕಣದಲ್ಲಿ ಚಿತ್ರಿಸಲಾಗಿದೆ. ಇಲ್ಲಿನ ಮತ್ತೊಂದು ವಿಶೇಷವೇನೆಂದರೆ ದಶಾವತಾರ ಚಿತ್ರದಲ್ಲಿ ಬಲರಾಮ ಮತ್ತು ಬುದ್ಧನ ಚಿತ್ರವನ್ನು ಚಿತ್ರಿಸಿರುವುದು ಇಲ್ಲಿನ ವಿಶೇಷವಾಗಿದೆ. ಈ ಚಿತ್ರಗಳು ಮೈಸೂರು ಸಂಪ್ರದಾಯಕ ಶೈಲಿಯಲ್ಲಿದ್ದು ಸುತ್ತಲಿನ ಚೌಕಟ್ಟುಗಳನ್ನು ಹೂ ಬಳ್ಳಿಗಳಿಂದ ಅಲಂಕರಿಸಲಾಗಿದೆ.

ಬೆನಕನ ಕೆರೆಯ ಗರ್ಭಗುಡಿಯ ಬಲಬದಿಯಿಂದ ಆರಂಭಿಸಿ ದಶಾವತಾರ ರಾಮ ಲಕ್ಷ್ಮಣ ಸೀತೆಯರು ಅರಣ್ಯದಲ್ಲಿರುವುದು, ಜಿಂಕೆಯ ರೂಪು ತಳೆದಿರುವ ಮಾರೀಚನನ್ನು ಸೀತೆ ಬಯಸುತ್ತಿರುವುದು, ಲಕ್ಷ್ಮಣನು ರೇಖೆ ಎಳೆದು ಅದನ್ನು ದಾಟಿ ಬರದಂತೆ ತಿಳಿಹೇಳುತ್ತಿರುವುದು, ರಾವಣನು ಸನ್ಯಾಸಿಯಾಗಿ ಬಂದು ಅಪಹರಿಸಿ ಹೊರಟಿರುವುದು, ಜಟಾಯು ರಾವಣನಿಗೆ ಸೀತೆಯನ್ನು ಅಪಹರಿಸಿದಂತೆ ತಡೆಗಟ್ಟುವುದು, ರಾವಣನ ಜಟಾಯುವಿನ ರೇಕ್ಕೆಯನ್ನು ಕತ್ತರಿಸಿರುವುದು, ರಾಮಲಕ್ಷ್ಮಣರಿಗೆ ಜಟಾಯು ಸೀತೆ ಹೋದ ಮಾರ್ಗ ತೋರಿಸುತ್ತಿರುವುದು ಋಷ್ಯಿಯ ಮೂಕ ಪರ್ವತದಲ್ಲಿ ರಾಮಲಕ್ಷ್ಮಣರು ಹನುಮಂತ ಸುಗ್ರಿವರಿಗೆ ವಿಷಯ ತಿಳಿಸುತ್ತಿರುವುದು ವಾಲಿಸುಗ್ರೀವರ ಯುದ್ಧ ಹನುಮಂತ ತಾಟಕಿಯರ ಬಳಗ, ಹನುಮಂತರ ಸಾಗರೋಲಂಘನೆ, ಲಂಕಾದಹನ, ಸೀತೆಯಿಂದ ಮುದ್ರೆಯುಂಗುರ ಪಡೆಯುವಿಕೆ. ರಾಮರಾವಣರ ಯುದ್ಧ, ರಾವಣನ ಸಾವು, ರಾಮಪಟ್ಟಾಭಿಷೇಕ ಇವೇ ಮೊದಲಾದ ದೃಶ್ಯಗಳನ್ನು ಜನಪದ ಶೈಲಿಯಲ್ಲಿ ಚಿತ್ರಿಸಲಾಗಿದೆ.

ಮಿಂಚುಕಲ್ಲು ಗೊಲ್ಲಹಳ್ಳಿಯ ಹನುಮಂತ ದೇವಾಲಯದಲ್ಲಿ ಮೂರು ಅಡಿ ಉದ್ದ ಎರಡು ಅಡಿ ಅಗಲದ ಭಾಗದಲ್ಲಿ ದಶಾವತಾರಗಳಿಗೆ ಸಂಬಂಧಿಸಿದ ಕೆಲವೇ ಚಿತ್ರಗಳನ್ನು

ಹಾಗೂ ದಶಾವತಾರಗಳಲ್ಲಿ ಬುದ್ಧನ ಚಿತ್ರವಿರುವುದನ್ನು ಅ.ಲಿ.ನರಸಿಂಹನ್ ರವರು ಗುರುತಿಸಿರುವುದು ತಿಳಿದುಬಂದರೂ ಅಲ್ಲಿನ ನನ್ನ ಕ್ಷೇತ್ರಕಾರ್ಯದಲ್ಲಿ ಅಂತಹ ಯಾವ ಕುರುಹುಗಳು ಕಾಣದಿರುವುದು ಚಿತ್ರಕಲೆಯ ಬಗೆಗಿನ ನಮ್ಮ ನಿರ್ಲಕ್ಷ್ಯಕ್ಕೆ ನಿದರ್ಶನವಾಗಿದೆ.

ಶಿರಾದ ಕಾಳಿದಾಸ ನಗರದಲ್ಲಿನ ರೇವಣಸಿದ್ದೇಶ್ವರ ಸ್ವಾಮಿ ದೇವಾಲಯದಲ್ಲಿ ಗರ್ಭಗುಡಿಯ ದ್ವಾರದ ಇಕ್ಕೆಲಗಳ ಗೋಡೆಯಲ್ಲಿ ಚಿತ್ರಗಳಿದ್ದು, ಅಳಿದುಳಿದಿರುವ ಕೆಲವು ಚಿತ್ರಗಳು ವೈಷ್ಣವ ಧರ್ಮದ ದಶಾವತಾರದ ಪುರಾಣಗಳಲ್ಲಿನ ಕಥೆಯನ್ನು ಆಧರಿಸಿದ ಚಿತ್ರಗಳಾಗಿವೆ. ಗರ್ಭಗುಡಿಯ ಇದೇ ಚಿತ್ರದ ಪಕ್ಕದಲ್ಲಿ ಅಭಯಾಸ್ತ ಹನುಮಂತನ ಚಿತ್ರವು ವಿಶೇಷವಾಗಿದೆ. ಹನುಮಂತನು ಬಲಗೈ ಅಭಯಾಸ್ತದಿಂದ ಎಡಗೈ ಹೂ ಹಿಡಿದು ರಾಕ್ಷಸನೊಬ್ಬನ ಸಂಹರಿಸಿ ಜಯಗಳಿಸಿರುವ ಅಥವಾ ಪ್ರಸನ್ನನಾಗಿರುವ ಚಿತ್ರವಿದೆ. ಇದರ ತಲೆಯ ಮೇಲೆ ವಿಷ್ಣುವಿನ ದಶಾವತಾರದ ಚಿತ್ರಗಳನ್ನು ಸಾಲಾಗಿ ಚಿತ್ರಿಸಲಾಗಿದೆ.

ಇದರ ಪಕ್ಕದಲ್ಲಿ ಗರುಡನ ಚಿತ್ರವಿದೆ. ಗರುಡನು ಬಲಗೈಯಲ್ಲಿ ಸರ್ಪವನ್ನು ಹಿಡಿದು ಎಡಗೈ ಅಭಯಾಮುದ್ರೆಯಲ್ಲಿದೆ. ಕಿರೀಟ ಸಮೇತನಾದ ಗರುಡನು ಮೈ ತುಂಬ ಆಭರಣಗಳಿಂದ ಅಲಂಕರಿಸಿಲಾಗಿದೆ. ಈ ಚಿತ್ರವು ಪಾರ್ಶ್ವ ಮುಖವುದ್ದಾಗಿದೆ. ಇದಾದ ನಂತರ ಚತುರ್ಭುಜದ ವೇಣುಗೋಪಾಲನ ಚಿತ್ರವಿದೆ. ಕೃಷ್ಣನು ಸರ್ವಾಲಂಕಾರ ಭೂಸಿತನಾಗಿ ನಾಲ್ಕು ಕೈಗಳಿಂದ ಕೊಳಲನ್ನು ಹಿಡಿದಿದ್ದು ಶಂಕ ಚಕ್ರದರನಾಗಿ ಮಂದಹಾಸ ಬೀರುತ್ತದೆ. ಒಂಟಿಕಾಲಿನ ಭಂಗಿಯಲ್ಲಿ ನಿಂತಿದ್ದಾನೆ. ಈ ಚಿತ್ರವು ಕೃಷ್ಣನ ಇಕ್ಕೆಲಗಳಲ್ಲಿ ಸಖಿಯರು ಮೊಸರು ಗಡಿಗೆಯನ್ನು ಹೊತ್ತು ನಿಂತಿದ್ದಾರೆ. ಒಂದು ಭಾಗದಲ್ಲಿ ಮಾತ್ರ ಗೋಪಾಲನ ಗೆಳೆಯನಿದ್ದಾನೆ. ಈ ಚಿತ್ರವನ್ನು ಕಲಾವಿದನು ಸಂಯೋಜನೆಯ ದೃಷ್ಟಿಯಿಂದ ಹೊಂದಿಸಲಾಗಿದೆ. ಎಂದು ತೋರುತ್ತದೆ. ಕೃಷ್ಣನ ಹಿಂಬದಿಯಲ್ಲಿ ಕಾಮದೇನು ಹಾಗೂ ಹಲವಾರು ಗೋವಿನಗಳಿಂದ ಕೂಡಿದ ಅವುಗಳು ಗೋವಿಂದನ ಕೊಳನಾದಕ್ಕೆ ತಲೆದೂಗಿದಂತೆ ಚಿತ್ರಿಸಿದ್ದಾನೆ.

ನಂತರದ ಚಿತ್ರವು ಉಗ್ರನರಸಿಂಹನ ಚಿತ್ರವನ್ನು ರಚಿಸಲಾಗಿದೆ. ನರಸಿಂಹನು ಎಂಟು ಕೈಗಳನ್ನು ಹೊಂದಿದ್ದು ಶಂಕ, ಚಕ್ರ ಮತ್ತು ಪಾಶಾಂಕುರಯಿಡಿದಿದ್ದಾನೆ ನರಸಿಂಹನು ಭಕ್ತ ಪ್ರಹ್ಲಾದನ ಕರೆಗೆ ಹೋಗೊಟ್ಟು ಕಂಬದಿಂದ ಉದ್ಭವಿಸಿ ಉಗ್ರಸ್ವರೂಪದ ತಾಳಿದ್ದಾನೆ. ಇವನ ಎರಡೂ ಕಡೆಯಲ್ಲೂ ಭಕ್ತ ಪ್ರಹ್ಲಾದ ಮತ್ತು ತಾಯಿ ಗಯಾದು ಭಕ್ತಿಯಿಂದ ಕೈ ಮುಗಿದು ನಿಂತಿದ್ದಾರೆ. ಕಲಾವಿದನು ನರಸಿಂಹನ ಚಿತ್ರದ ಹಿಂದೆ ಜ್ವಾಲೆಯ ಪ್ರಖರತೆಯನ್ನು ತೋರಿಸಿ ಸಂಕೇತವಾಗಿ ಪಕ್ಕದಲ್ಲಿ ಒಂದು ಸಣ್ಣ ಕಂಬವನ್ನು ಚಿತ್ರಿಸಿದ್ದಾನೆ. ಪ್ರತ್ಯೇಕ ಕಮಾನಿನಲ್ಲಿ ಎರಡೂ ಮೂಲೆಗಳನ್ನು ಚಿತ್ರಿಸಲಾಗಿದೆ.

ಹೆಬ್ಬೂರಿನ ವೇಣುಗೋಪಾಲ ದೇವಾಲಯವು ವೈಷ್ಣವ ಧರ್ಮದ ಭಿತ್ತಿಚಿತ್ರಗಳಿಂದ ಕೂಡಿದ್ದೂ ರಾಮ, ವಿಷ್ಣು, ಸರಸ್ವತಿ, ಜಯ ವಿಜಯರ ಚಿತ್ರಗಳನ್ನು ಚಿತ್ರಿಸಲಾಗಿದೆ. ಅವುಗಳು ಈಗಾಗಲೇ ಅವಸಾನದಲ್ಲಿರುವುದರಿಂದ ಅವುಗಳ ಬಣ್ಣ ಹಾಗೂ ಆಕಾರವೇ ತಿಳಿಯಲಾಗದಷ್ಟು ಆಳಾಗಿವೆ. ಆದರೆ ಚಿತ್ರಗಳ ಬಾಹ್ಯ ರೇಖೆಗಳು ಮಾತ್ರ ಅಲ್ಲಲ್ಲಿ ಉಳಿದಿರುವುದು ಚಿತ್ರದ ಜೀವಂತಿಕೆಯನ್ನು ಹಾಗೂ ಉತ್ತಮ ಸಾಂಪ್ರದಾಯಕ ಚಿತ್ರಗಳಿದ್ದವೆಂಬುದಕ್ಕೆ ಸಾಕ್ಷಿಯಾಗಿವೆ. ರೇಖೆಗಳು ಕಲಾವಿದನ ನೈಪುಣ್ಯತೆಯ ಪ್ರತೀಕವಾಗಿವೆ. ಕಲಾವಿದನನ್ನು ಶಾಸ್ತ್ರೋಕ್ತವಾಗಿಯೇ ಇಲ್ಲಿನ ಚಿತ್ರಗಳನ್ನು ರಚಿಸಿದ್ದಾನೆ. ಪ್ರಕೃತಿವಿಕೋಪಕ್ಕೆ ಬೇಗ ತುತ್ತಾಗಿ ಆಳಾಗಿರುವುದು ನಮ್ಮೆಲ್ಲರ ದುರ್ದೈವವಾಗಿದೆ.

ಕರ್ನಾಟಕದ ದಶಾವತಾರದ ಭಿತ್ತಿ ಚಿತ್ರಗಳಲ್ಲಿ ವೈಷ್ಣವ, ಶೈವ ಧರ್ಮದ ಹಿನ್ನೆಲೆಯ ಚಿತ್ರಗಳಿದ್ದು, ಅವುಗಳಲ್ಲಿ ವೈಷ್ಣವ ಧರ್ಮದ ಹಿನ್ನೆಲೆಯ ಚಿತ್ರಗಳಾದ ವಿಷ್ಣುವಿನ ದಶಾವತಾರಗಳ ದೃಶ್ಯಗಳನ್ನು ಚಿತ್ರಿಸಿದ್ದ ಎಂದು ಅವುಗಳನ್ನು ಮರುಕೃತಿ ಮಾಡಿದ ಕಲಾವಿದರು ಸಂದರ್ಶನ ವೇಳೆ ತಿಳಿಸಿದರು. ಆದುದರಿಂದ ಅಲ್ಲಯೂ ಸಹಿತ ವೈಷ್ಣವ ಧರ್ಮದ ಹಿನ್ನೆಲೆ ಚಿತ್ರಗಳು ಇದ್ದವು ಎಂಬುದು ತಿಳಿಯುತ್ತದೆ.

ಜಿಲ್ಲೆಯಲ್ಲಿ ವೈಷ್ಣವ ಧರ್ಮದ ಹಿನ್ನೆಲೆಯ ಚಿತ್ರಗಳು ಬಹುಭಾಗದಲ್ಲಿ ಕಂಡು ಬಂದಿರುವುದು ಒಂದು ವಿಶೇಷವಾಗಿದೆ. ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತವೆ. ಜಿಲ್ಲೆಯಾದ್ಯಂತ ಕಂಡು ಬರುವ ವಿಷ್ಣುವಿನ ದಶಾವತಾರ, ರಾಮಾಯಣದ ಕೆಲವು ದೃಶ್ಯಗಳು ಹಾಗೂ ಕೃಷ್ಣನ ಬಾಲ್ಯ ಲೀಲೆಗೆ ಸಂಬಂಧಿಸಿದ ಚಿತ್ರಗಳು ಸಾಮಾನ್ಯವಾಗಿವೆ. ಸಿಬಿಯ ದೇವಾಲಯದಲ್ಲಿರುವ ಚಿತ್ರಗಳು ವೈಷ್ಣವ ಧರ್ಮದ ಹಿನ್ನೆಲೆಯ ಭಾಗವತ ಪುರಾಣದ ದೃಶ್ಯದ ಮೂಲಕ ಕಲಾವಿದ ಕಟ್ಟಿಕೊಡುವ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದಾನೆ, ಎಂಬ ಸಂಗತಿಯನ್ನು ಒಪ್ಪಿಕೊಳ್ಳಲೇಬೇಕು.

## ಅಧ್ಯಾಯ ಮೂರು

# ಭಿತ್ತಿ ಮಾಧ್ಯಮದ ದಶಾವತಾರ ಚಿತ್ರಗಳು



## ಅಧ್ಯಾಯ ೩

# ಭಿತ್ತಿ ಮಾಧ್ಯಮದ ದಶಾವತಾರ ಚಿತ್ರಗಳು

ಭಾರತೀಯ ಚಿತ್ರಕಲಾ ಪರಂಪರೆಯಲ್ಲಿ ಕರ್ನಾಟಕದ ಭಿತ್ತಿ ಚಿತ್ರಗಳಿಗೆ ತನ್ನದೇ ಆದ ಮಹತ್ವದ ಸ್ಥಾನವಿದೆ. ಕನ್ನಡ ನಾಡಿನ ಜನತೆ ಭಿತ್ತಿ ಚಿತ್ರಗಳನ್ನು ರಚಿಸುವ ಮೂಲಕ ಕಲಾಕಾರರಾಗಿ ಭಿತ್ತಿಚಿತ್ರಗಳನ್ನು ಬರೆಸುವುದರೊಂದಿಗೆ ಕಲೆಯನ್ನು ಪೋಷಣೆ ಮಾಡುತ್ತಿದ್ದಾರೆ. ಈ ಭಿತ್ತಿಚಿತ್ರ ನಿರ್ಮಾಣ ಪರಂಪರೆಯನ್ನು ಜೀವಂತವಾಗಿಸುವುದರ ಜೊತೆಗೆ ನಮ್ಮ ನಾಡನ್ನು ಸಂಪದ್ಭರಿತ ಪ್ರದೇಶವನ್ನಾಗಿ ಮಾಡಿದ್ದಾರೆ. ಇವುಗಳಲ್ಲಿ ಪೌರಾಣಿಕ ಚಿತ್ರಗಳು ಒಂದು ಧರ್ಮದ ಪರವಾಗಿ ಸಾಮಾಜಿಕ ಚಿತ್ರಗಳು ಮನರಂಜನೆ ಮತ್ತು ನೀತಿಭೋಧನೆಯನ್ನು ಹಾಗೂ ಜನಪದ ಚಿತ್ರಗಳು ನಂಬಿಕೆ ಆಚರಣೆಗಳ ಸುತ್ತ ಇರುವುದನ್ನು ಕಾಣಬಹುದಾಗಿದೆ.[೧]

ಇಲ್ಲಿ "ಪೌರಾಣಿಕ"ವನ್ನು ಧರ್ಮದೊಂದಿಗೆ ಸಮಾವೇಶಗೊಳಿಸಲಾಗಿದೆ. ಭಾರತವು ಹಲವಾರು ವಿಭಿನ್ನ ಧರ್ಮಗಳಿಗೆ ನೆಲೆಯಾಗಿದ್ದು ಅವುಗಳಲ್ಲಿ ಪ್ರಮುಖವಾದ ಬೌದ್ಧ, ಜೈನ, ವೈಷ್ಣವ ಇತ್ಯಾದಿಗಳು ಕರ್ನಾಟಕದಲ್ಲಿಯೂ ತನ್ನ ನೆಲೆಯನ್ನು ಕಂಡುಕೊಂಡಿದ್ದು ಚಿತ್ರ, ಶಿಲ್ಪಗಳಲ್ಲೂ ಅವುಗಳ ಧಾರ್ಮಿಕತೆಯನ್ನು ನೋಡಬಹುದು ಅಥವಾ ನಮ್ಮ ಪರಂಪರಾನುಗತ ಚಿತ್ರಶಿಲ್ಪಗಳು ಯಾವುದಾದರೂ ಧರ್ಮಕ್ಕೆ ಸಂಬಂಧಿಸಿದಂತೆ ರೂಪಿತವಾಗಿರುವುದೇ ಹೆಚ್ಚು ವಿಶೇಷವಾಗಿ ವೈಷ್ಣವ ಧರ್ಮದಲ್ಲಿ ಹಲವಾರು ಒಳ ಪ್ರಭೇಧಗಳಿದ್ದು,[೨] ಅವುಗಳದೇ ಪೌರಾಣಿಕ ಅಥೆಗಳಿದ್ದು ಅದನ್ನು ಚಿತ್ರಶಿಲ್ಪಗಳಲ್ಲಿ ಮೂಡಿಸಿಕೊಂಡಿವೆ.

---

೧. ಡಾ. ಯಾದಪ್ಪ ಪರದೇಶಿ, ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಪುಟ.೩

೨. ಎಸ್.ವೆಂಕಟೇಶ ಅವರ ಲೇಖನ, ಶಿರಾದ ಭಿತ್ತಿಚಿತ್ರಗಳು, ಪುಟ.೧೫

ಇಂಥಹ ಪುರಾಣ ಆಧಾರಿತ ಕಥೆಗಳನ್ನು ಸರಣಿ ಚಿತ್ರಗಳ ಪುರಾಣದಲ್ಲಿ ಸಂಯೋಜನೆ ಚಿತ್ರಿಸಲು ತನ್ನದೇಯಾದ ಮಾಧ್ಯಮದ ಆಯ್ಕೆ ಮಾಡಿಕೊಂಡಿದ್ದಾರೆ. ಅಂತಹ ಮಾಧ್ಯಮದಲ್ಲಿ ಭಿತ್ತಿ ಮಾಧ್ಯಮವು ಒಂದಾಗಿದೆ.[೩] ಕರ್ನಾಟಕದಲ್ಲಿ ೧೬ನೇ ಶತಮಾನಕ್ಕೆ ವಿಜಯನಗರ ಗಾರೆ ಭಿತ್ತಿಯನ್ನು ಮಾಧ್ಯಮವನ್ನಾಗಿ ಬಳಸಿದ ಕುರುಹುಗಳನ್ನು ವಿಯನಗರ ಇತಿಹಾಸದಲ್ಲಿ ಕಾಣಬಹುದು. ಭಿತ್ತಿ ಚಿತ್ರಕಲೆ ಪರಂಪರೆ ಪ್ರಾಚೀನ ಕಾಲದಿಂದಲೂ ಇವತ್ತಿನವರೆಗೂ ವಿವಿಧ ಮಾಧ್ಯಮಗಳಿಂದ ವಿಭಿನ್ನ ದೃಷ್ಟಿಕೋನದಿಂದ ಅಲಂಕರಿಸುತ್ತಿದ್ದರು ಎಂದು ತಿಳಿದುಬರುತ್ತದೆ. ರಚನೆಯಾಗುತ್ತಲೇ ಬಂದಿದೆ. ಅದು ಪ್ರಾಗೈತಿಹಾಸಿಕ ಚಿತ್ರಕಲೆ, ಜನಪದ ಮತ್ತು ಶಿಷ್ಟಪದ ಚಿತ್ರಕಲೆ, ಅಲ್ಲದೆ, ಸಮ್ಮಿಶ್ರಣದ ಮಾದರಿಯ ಭಿತ್ತಿ ಚಿತ್ರಕಲೆ ಆರಂಭವಾಗಿತ್ತು.[೪] ಅಲ್ಲದೆ ಸಮ್ಮಿಶ್ರಣದ ಮಾದರಿಯ ಭಿತ್ತಿ ಚಿತ್ರಕಲೆ, ಎಂಬ ಹೆಸರುಗಳಿಂದ ಪ್ರಚಲಿತಗೊಳಿಸಬಹುದಾಗಿದೆ.

ಇದೇ ರೀತಿಯಲ್ಲಿ ಭಿತ್ತಿ ಚಿತ್ರಕಲೆಯಿರುವ ಬಗ್ಗೆ ಉಲ್ಲೇಖಗಳನ್ನು ಗಮನಿಸುವುದಾದರೆ, ಸುಮಾರು ಕ್ರಿ.ಪೂ. ೬೦೦ ವರ್ಷಗಳ ಹಿಂದಿನ ಸಿಂಧೂ ನಾಗರಿಕತೆಯ ಕಾಲದಲ್ಲಿ ಜನರು ತಮ್ಮ ವಾಸ್ತುಗಳನ್ನು ಭಿತ್ತಿ ಚಿತ್ರಗಳಿಂದ ಅಲಂಕರಿಸುತ್ತಿದ್ದರು ಎಂದು ತಿಳಿದುಬರುತ್ತದೆ. ಹರಪ್ಪಾ ಮಹೆಂಜೊದಾರೊದಲ್ಲಿನ ಉತ್ಖನನ ಸಮಯದಲ್ಲಿ ದೊರೆತ ಶಿಲಾಗುಹೆಗಳ, ಗೋಡೆಗಳ ಮೇಲೆ ಬಣ್ಣದ ಉಳಿಕೆಗಳು ಕಂಡುಬಂದಿವೆ. ವೇದಗಳಲ್ಲೇ ಮೊದಲನೆಯದಾದ ಋಗ್ವೇದದಲ್ಲಿ ಚಿತ್ರಕಲೆಯ ಕುರಿತು ಪ್ರಸ್ತಾಪ ಬರುತ್ತದೆ.[೫] ಕರ್ನಾಟಕದಾದ್ಯಂತ ಅತ್ಯಂತ ಪುರಾತನ ಭಿತ್ತಿ ಚಿತ್ರ ಕಲ್ಲಾಸರೆಗಳ ಗುಹೆಗಳಲ್ಲಿ ಕಂಡುಬಂದಿದ್ದು ದಕ್ಷಿಣ ಭಾರತದ ಅತ್ಯಂತ ಪುರಾತನ ಭಿತ್ತಿ ಚಿತ್ರಗಳೂ ಇವೇ ಎಂದು ಡಾ. ಅ.ಸುಂದರ ಅವರ ಅಭಿಪ್ರಾಯವಾಗಿದೆ.

### ವಿಷ್ಣುವಿನ ದಶಾವತಾರಗಳು

ದಶಾವತಾರದ ಚಿತ್ರಗಳು ಹಂಪೆಯಲ್ಲಿ ಮೊದಲಬಾರಿಗೆ ಕಾಣಿಸಿವೆ. ಈ ಚಿತ್ರಸಮೂಹದಲ್ಲಿ ಸೀತಾ ಸ್ವಯಂವರದ ದೃಶ್ಯದ ನಂತರ ವಿಷ್ಣುವಿಗೆ ಸಂಬಂಧಿಸಿದ ದಶಾವತಾರಗಳ ಚಿತ್ರದ ಒಂದು ಉದ್ದನೆಯ ಪಟ್ಟಿ ಇದೆ. ಈ ಅವತಾರಗಳ ಚಿತ್ರಗಳನ್ನು ಇಲ್ಲಿ ಪ್ರತ್ಯೇಕ ಗೋಪುರಗಳೊಂದಿಗೆ ವಿಭಾಗಿಸಿ ಚಿತ್ರಿಸಲಾಗಿದೆ. ಈ ಚಿತ್ರಗಳಲ್ಲಿ ಕಥಾ ನಿರೂಪಣೆ ಕಂಡುಬರದೆ, ಸಂಕೇತಗಳಿಂದಲೇ ಆಯಾ ಅವತಾರಗಳನ್ನು ಇಲ್ಲಿ ಗುರುತಿಸಬಹುದಾಗಿದೆ.[೬] ಇನ್ನುಳಿದ ಇರತ ಕಥೆಗಳಲ್ಲಿಯೂ ಭಿತ್ತಿಚಿತ್ರಗಳಲ್ಲಿ ಅವತಾರಗಳನ್ನು ಕ್ರಿಯೆಯೊಂದಿಗೆ ನಿರೂಪಿಸಲಾಗಿದೆ. ಉದಾಹರಣೆಗೆ, ಬಿ.ಕೆ.

---

೩. ಕಾಂತರಾಜ ಸಿ.ಎಸ್., ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಕಲೆ, ಪುಟ.೧೨

೪. ಸುಚಿತ್ರಾ ಗ. ಲಿಂಗದಳ್ಳಿ, ವಿಜಯನಗರ ಭಿತ್ತಿಚಿತ್ರಕಲೆ, ಪುಟ. ೪

೫. ಡಾ. ಆನಂದ ಕೆ. ಪೂಜಾರ, ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ, ಪುಟ.೧೧೪

೬. ಅದೇ ಮಹಾಪ್ರಬಂಧ, ಪುಟ.೧೧೬

ಹಳ್ಳಿಯ ಭಿತ್ತಿ ಚಿತ್ರಗಳಲ್ಲಿ ದಶಾವತಾರದ ಚಿತ್ರಗಳನ್ನು ಆಯಾ ದುಷ್ಟ ಶಕ್ತಿಯನ್ನು ಸಂಹಾರ ಮಾಡುವುದರಲ್ಲಿ ತೊಡಗಿರುವ ಅವತಾರಗಳನ್ನು ಕಾಣಬಹುದಾಗಿದೆ.

ಹಂಪೆಯ ಭಿತ್ತಿಚಿತ್ರಗಳಲ್ಲಿ ವಿಷ್ಣುವಿನ ಅವತಾರಗಳು ಆಯಾ ಆಯುಧ ಮತ್ತು ಸಂಕೇತಗಳಿಂದ ನಿಂತ ಭಂಗಿಯಲ್ಲಿ ರಚಿಸಲಾಗಿದ್ದು ಗಾಢ ಕೆಂಪು ವರ್ಣದ ಹಿನ್ನೆಲೆಯಲ್ಲಿ ಆಕೃತಿಗಳು ಸ್ಫುಟವಾಗಿ ಎದ್ದುಕಾಣುತ್ತವೆ.

ತ್ರಿಮೂರ್ತಿಗಳಲ್ಲಿ ಒಬ್ಬನಾದ ವಿಷ್ಣುವು ಲೋಕ ಕಲ್ಯಾಣಕ್ಕಾಗಿ ಒಂದೊಂದು ಸಂದರ್ಭದಲ್ಲಿ ಒಂದೊಂದು ಅವತಾರಗಳನ್ನು ತಾಳಿ ದುಷ್ಟರಿಂದ ಜಗತ್ತನ್ನು ರಕ್ಷಿಸಿದ ಜಗದ್ರಕ್ಷಕ ಎಂಬ ಪ್ರತಿಮೆ ಇದೆ. ಈ ಅವತಾರಗಳ ಹಿನ್ನೆಲೆಯಲ್ಲಿ ರೋಚಕವಾದ ಕಥೆಗಳನ್ನು ಹೆಣೆಯಲಾಗಿದೆ. ಈ ಅವತಾರಗಳಲ್ಲಿ ಮೊದಲಿಗೆ ಬರುವುದು ಮತ್ಸ್ಯ (ಮೀನು) ಅವತಾರ, ನಂತರ ಕೂರ್ಮ (ಆಮೆ), ವರಹಾ (ಹಂದಿ) ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ, (ಕಲಿಯುಗ) ಹೀಗೆ ವಿಷ್ಣುವಿನ ಹತ್ತು ಅವತಾರಗಳು ಇಲ್ಲಿವೆ.[೭]

ದುಷ್ಟ ಶಕ್ತಿಯೊಂದು ಪೌರಾಣಿಕ ಗ್ರಂಥಗಳಾದ ವೇದ, ಉಪನಿಷತ್ತುಗಳನ್ನು ಸಮುದ್ರ ಆಳಕ್ಕೆ ಹೊತ್ತುಕೊಂಡು ಹೋದಾಗ ವಿಷ್ಣು ಮತ್ಸ್ಯ ಅವತಾರವನ್ನು ತಾಳಿ ದುಷ್ಟಶಕ್ತಿಯೊಂದಿಗೆ ಹೋರಾಡಿ ವೇದ ಉಪನಿಷತ್ತುಗಳನ್ನು ರಕ್ಷಿಸಲು ವಿಷ್ಣು ಈ ಅವತಾರವನ್ನು ತಾಳಿದರೆ, ಎರಡನೇ ಅವತಾರದಲ್ಲಿ ಸಮುದ್ರ ಮಂಥನದ ಸಂದರ್ಭದಲ್ಲಿ ಜಗತ್ತನ್ನು ಕಾಪಾಡಲು ಕೂರ್ಮ ಅವತಾರವನ್ನು ತಾಳುತ್ತಾನೆ. ಹಾಗೇ, ಭೂಮಿಯನ್ನು ಹೊತ್ತುಕೊಂಡು ಹೋದ ಹಿರಣಾಕ್ಷ್ಯ ಎಂಬ ರಾಕ್ಷಸನು ಸಂಹರಿಸಿ, ತಮ್ಮ ಕೋರೆಹಲ್ಲಿನಿಂದ ಭೂಮಿಯನ್ನು ಸಮುದ್ರ ಆಳದಿಂದ ಮೇಲಕ್ಕೆತ್ತಲು ವರಾಹ ತಾಳುತ್ತಾನೆ ಮತ್ತು ಸಾವಿಲ್ಲದ ವರವನ್ನು ಪಡೆದ ಹಿರಣ್ಯಕಶಿಪು ಎಂಬ ರಾಕ್ಷಸನ ಅಟ್ಟಹಾಸವನ್ನು ಧ್ವಂಸಮಾಡಲು ವಿಷ್ಣು ನರಸಿಂಹನ ಅವತಾರವನ್ನು ತಾಳದರೆ, ಕೇಳಿದ ವರವನ್ನು ಕೊಡುವ ಬಲಿಚಕ್ರವರ್ತಿ ಎಂಬ ಮುನಿಯ ಗರ್ವವನ್ನು ಮುರಿಯಲು ವಾಮನ ಅವತಾರವನ್ನು ಹೊಂದುತ್ತಾನೆ. ಹಾಗೇ ದುಷ್ಟ ಕ್ಷತ್ರೀಯರನ್ನು ಸಂಹಾರ ಮಾಡಲು ಪರಶುರಾಮನ ಅವತಾರ, ರಾವಣನನ್ನು ಸಂಹಾರ ಮಾಡಲು ರಾಮನ ಅವತಾರ ಮತ್ತು ಕಂಸನನ್ನು ಸಂಹಾರ ಮಾಡಲು ಕೃಷ್ಣನ ಅವತಾರವನ್ನು ಇಲ್ಲಿ ಒಂಬತ್ತನೇ ಅವತಾರ ಬುದ್ಧನದಾಗಿದ್ದು ನಗ್ನರೂಪದಲ್ಲಿ ಇದ್ದಾನೆ.[೮] ತ್ರಿಪುರ ಸಂಹಾರದಲ್ಲಿ ಶಿವನಿಗೆ ನೆರವಾಗಲು ವಿಷ್ಣು ಬುದ್ಧನ ಅವತಾರ ತಾಳಿದ್ದನ್ನು ಎಂಬುದು ಪ್ರತೀತಿ. ದಶಾವತಾರಗಳಲ್ಲಿ ಬುದ್ಧ

೭. ಸುಚಿತ್ರಾ ಗ. ಲಿಂಗದಳ್ಳಿ, ವಿಜಯನಗರ ಭಿತ್ತಿಚಿತ್ರಕಲೆ, ಪುಟ. ೪

೮. ಕಾಂತರಾಜ ಸಿ.ಎಸ್., ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಕಲೆ, ಪುಟ.೧೨

ಒಂದು ಪ್ರಭೇದವಾಗಿ ಬಲರಾಮ ಒಂದು ಅವತಾರವಾಗಿ ಪರಿಗಣಿಸುವುದರಲ್ಲಿ ಬುದ್ಧ ಇರುವುದಿಲ್ಲ. ಶ್ರೀವೈಷ್ಣವರ ಪ್ರಕಾರ ಬಲರಾಮ ಎಂಟನೇ ಅವತಾರ ಕೃಷ್ಣ ಒಂಬತ್ತನೇ ಅವತಾರಕ್ಕೆ. ಕ್ರಿ.ಶ.೧೫೫೪ರ ವೇಳೆಯಲ್ಲಿ ವಿಜಯನಗರದಲ್ಲಿ ಶ್ರೀವೈಷ್ಣವರ ಪ್ರಭಾವವಿದ್ದರೂ ಮಾಧ್ವದಾಸರ ಪದಗಳಿಂದ ಸ್ಫೂರ್ತಿಗೊಂಡು ವಿಠಲ ಮಂಟಪದ ಕಂಬಗಳಲ್ಲಿ ಬೌದ್ಧಾವತಾರ ಕೆತ್ತಿದ್ದಾರೆ. ಬಹುಶಃ ಈ ಅಂಶ ಚಿತ್ರಕಲೆಗಲ್ಲೂ ಬಂದಿರುವ ಸಾಧ್ಯತೆಯಿದೆ.

ದಶಾವತಾರದಲ್ಲಿ ಬುದ್ಧನ ಭಿತ್ತಿಚಿತ್ರ ಕರ್ನಾಟಕದಲ್ಲಿ ಮೊದಲ ಬಾರಿಗೆ ಹಂಪಿಯ ವಿರೂಪಾಕ್ಷ ದೇವಾಲಯದಲ್ಲಿ ಕಂಡುಬರುತ್ತದೆ. ಅದು ತ್ರಿಪುರ ಸಂಹಾರದಲ್ಲಿ ವಿಷ್ಣು (ಬುದ್ಧ) ಮರದ ಮುಂದೆ ನಿಂತಿರುವಂತೆ ಇಲ್ಲಿಯೂ ದಶಾವತಾರಗಳಲ್ಲಿ ಒಂಬತ್ತನೆಯದಾಗಿ ಚಿತ್ರಿಸಿದೆ, ಬಿ.ಕೆ. ಹಳ್ಳಿರಾಮ ದೇವಾಲಯದಲ್ಲಿ ಜನಪದ ಶೈಲಿಯ ಬೌದ್ಧವತಾರವನ್ನು ಕಾಣಬಹುದು.

ಇನ್ನು ವಿಷ್ಣುವಿನ ಹತ್ತನೆ ಅವತಾರದಲ್ಲಿ ಕಲ್ಕಿ (ಕಲಿಯುಗ)ಯನ್ನು ಚಿತ್ರಿಸಿದ್ದು. ಇಲ್ಲಿ ಕಲ್ಕಿ ಕುದುರೆಯನ್ನು ಹಿಡಿದುಕೊಂಡು ನಿಂತಿದ್ದಾನೆ. ಇಲ್ಲಿ ಮತ್ಸ್ಯ ಮತ್ತು ಕೂರ್ಮವಾತರಾದಲ್ಲಿ ವಿಷ್ಣುವಿನ ರೂಪವು ಸೊಂಟದ ಕೆಳಗಿನ ಭಾಗ ಮತ್ಸ್ಯ ಮತ್ತು ಕೂರ್ಮ ರೂಪದಲ್ಲಿದೆ, ಸೊಂಟದ ಮೇಲ್ಭಾಗ ಮಾನವನ ರೂಪದಲ್ಲಿದೆ. ಹಾಗೆಯೇ, ವರಾಹ ಮತ್ತು ನರಸಿಂಹನ ಅವತಾರದಲ್ಲಿ ವಿಷ್ಣುವಿನ ಸೊಂಟದ ಮೇಲ್ಭಾಗ ವರಾಹ ಮತ್ತು ಸಿಂಹ ರೂಪದಲ್ಲಿದ್ದರೆ ಸೊಂಟದ ಕೆಳಭಾಗ ಮನುಷ್ಯ ರೂಪದಲ್ಲಿದೆ. ಈ ಆಕೃತಿಗಳೆಲ್ಲಾ ನಾಲ್ಕು ಕೈಗಳನ್ನು ಹೊಂದಿದ್ದು ಎರಡು ಕೈಗಳಲ್ಲಿ ಶಂಖ ಮತ್ತು ಚಕ್ರವನ್ನು ಹಿಡಿದಿದ್ದಾರೆ. ವಾಮನ ಅವತಾರದಲ್ಲಿ ಎಡಗೈಯಲ್ಲಿ ಕಮಂಡಲ, ಮತ್ತು ಬಲಗೈಯಲ್ಲಿ ಛತ್ರಿಯಿದೆ. ಮತ್ತು ಪರುಶುರಾಮನು ಕೈಯಲ್ಲಿ ಕೊಡಲಿ ಹಿಡಿದಿದ್ದಾನೆ ಕೃಷ್ಣನು ನೃತ್ಯ ಮಾಡುವ ರೂಪದಲ್ಲಿ ಕಂಡುಬಂದಿದ್ದರೆ ಬುದ್ಧನು ನಗ್ನರೂಪದಲ್ಲಿ ಇರುವನು.

ಹೀಗೆ ಕರ್ನಾಟಕದ ಭಿತ್ತಿಚಿತ್ರಕಲೆಗೆ ದೀರ್ಘ ಕಾಲದ ಒಂದು ಪರಂಪರೆಯಿದೆ. ಶಾಸನಗಳಲ್ಲಿ ಹಾಗೂ ಪುರಾತನ ಕನ್ನಡ ಕಾವ್ಯಗಳಲ್ಲಿ ಚಿತ್ರಾಲಂಕೃತ ದೇವಾಲಯಗಳ ಮತ್ತು ಭವನಗಳ ಉಲ್ಲೇಖವಿದೆ. ಹಾಗೆಯೇ ಚಿತ್ರಗಳಿಂದ ಕೂಡಿದ ಪ್ರತ್ಯೇಕ ಚಿತ್ರಶಾಲೆ ಹಾಗೂ ನಾಟ್ಯಶಾಲೆಗಳ ಪ್ರಸ್ತಾಪವೂ ಇದೆ. ಭೂಲೋಕದ ಸೋಮೇಶ್ವರನು ರಚಿಸಿದ ಬೃಹತ್ ಗ್ರಂಥ ಮಾನಸೋಲ್ಲಾಸದ ಚಿತ್ರರಚನೆಯ ಸಂದರ್ಭವು ನಾಟ್ಯಶಾಲೆಯನ್ನು ಪ್ರಸ್ತಾಪಿಸುವುದು ಚಿತ್ರರಚನೆಗೆ ಮೊದಲು ನಾಟ್ಯಶಾಲೆಯ ಭಿತ್ತಿ ಸಂಸ್ಕೃತಿಯ ಅಥವಾ ಗೋಡೆಯನ್ನು ಸಿದ್ದಪಡಿಸುವ ವಿಧಾನವಾದ್ದ ಈ ಭಾಗವು ಪ್ರಾರಂಭವಾಗುತ್ತದೆ ಹಾಗೂ ವಿಜಯನಗರೋತ್ತರ ಕಾಲದ ಇದೇ ವಿಧಾನದಡಿಯಲ್ಲಿ ವಿಜಯನಗರ ಕಾಲದ ಭಿತ್ತಿ ಚಿತ್ರಗಳನ್ನು ಕಾಣಬಹುದು.

ಶಿಬಿ ಭಿತ್ತಿ ಚಿತ್ರಗಳು

ತುಮಕೂರಿನಿಂದ ಉತ್ತರಕ್ಕೆ ಇಪ್ಪತ್ತೇಳು ಕಿ.ಮೀ ದೂರದಲ್ಲಿ ನಾಲ್ಕನೆಯ ರಾಷ್ಟ್ರೀಯ ಹೆದ್ದಾರಿಯ ಬಲಕ್ಕಿರುವುದೇ ಶಿಬಿ, ಇಲ್ಲಿರುವ ಐತಿಹಾಸಿಕ ದಾಖಲೆಗಳನ್ನು ಪರಿಶೀಲಿಸಿದಾಗ, ಹಿಂದೊಮ್ಮೆ ಅದು ರಾಜಕೀಯ ಹಾಗೂ ಧಾರ್ಮಿಕ ಮಹತ್ವ ಪಡೆದ ಊರಾಗಿತ್ತು ಎಂದೆನ್ನಿಸುವುದು. ಆದರೆ ಇಂದು ಅಲ್ಲಿ ಉಳಿದಿರುವುದು ನರಸಿಂಹ ದೇವಾಲಯವೊಂದೇ, ಸ್ಥಳದಲ್ಲಿ ದೊರೆತ ತಾಮ್ರ ಶಾಸನದ ಪ್ರಕಾರ ಅದರ ಹಿಂದಿನ ಹೆಸರು ಸಿಬೂರು ಎಂದಿತ್ತು ಚಂದ್ರಮೌಳೇಶ್ವರ ದೇವಾಲಯ ಇದ್ದಿತು. ವಿಜಯನಗರದ ಬುಕ್ಕನ ಮಗನಾದ ಹರಿಹರರಾಯನ ಕ್ರಿ.ಶ ೧೪೦೪ರಲ್ಲಿ ಅದನ್ನು ಅಗ್ರಹಾರವನ್ನಾಗಿ ಪರಿವರ್ತಿಸಿ ಎಂಭತ್ತಕ್ಕೂ ಹೆಚ್ಚು ಕೊಡುಗೆಗಳಾಗಿ ವಿಭಾಗಿಸಿ ಬ್ರಾಹ್ಮಣರಿಗೆ ಅವನನ್ನು ಮೆಚ್ಚಿಸಲೆಂದು ಪಂಡಿತರು ಅದನ್ನು ಹರಿಹರರಾಯಪುರ ಎಂದು ಕರೆಯಲಾರಂಭಿಸಿದ್ದರು.

ಈ ಶಿಬಿ ದೇವಾಲಯದ ದಾಖಲೆಯನ್ನು ಆಧರಿಸಿ ಡಾ.ಬಿ. ನಂಜುಂಡಸ್ವಾಮಿಯವರು ಶಾಸನದ ಪೂರ್ಣ ಪಾಠವನ್ನು ಇತಿಹಾಸ ದರ್ಶನದಲ್ಲಿ ನೀಡಿದ್ದಾರೆ. ೧೭೯೫ ರಲ್ಲಿ ರಚಿತವಾದ ಈ ಸನ್ನಿದಿನಂತೆ ಕಛೇರಿ ಕೃಷ್ಣಪ್ಪನವರು ಹೈದರ್ ನಾಮೆಯನ್ನು ಕಛೇರಿ ಕೃಷ್ಣಪ್ಪನವರೇ ಬರೆದಿದ್ದಾರೆ. ಹೀಗಾಗಿ ಸನ್ನಿದಿನಲ್ಲಿ ೧೭೯೫ ಎಂದು ಕಾಲ ಉಲ್ಲೇಖಿತವಾಗಿದ್ದರೂ ಭಿತ್ತಿ ಚಿತ್ರ ಮಧ್ಯದಲ್ಲಿರುವ ಲಿಖಿತ ಶಾಸನ ಮುಮ್ಮಡಿಯ ಕಾಲದ್ದು ಪ್ರಾಯಶಃ ೧೮೨೯ರ ವೇಳೆಯದು ಲಿಪಿಯ ವಿನ್ಯಾಸ ಮೈಸೂರು ಪ್ರಸನ್ನ ವೆಂಕಟರಮಣಸ್ವಾಮಿ ದೇವಾಲಯದ ೧೯೨೯ರ ಶಾಸನ ಲಿಪಿಯನ್ನು ಬಹಳವಾಗಿ ಹೋಲುತ್ತದೆ. ಎಂಬುದಾಗಿ ಕೃಷ್ಣಾನಂದ ಕಾಮತ್‌ರು ಹೇಳುವುದರಿಂದ ಶಿಬಿಯ ಚಿತ್ರಗಳನ್ನು ಈ ಕಾಲಕ್ಕೆ ಎಂದರೆ ೧೯ನೇ ಶತಮಾನದ ಆದಿಭಾಗಕ್ಕೆ ಎಂದು ಹೇಳಬಹುದಾಗಿದೆ.

ಶಿಬಿಯ ಚಿತ್ರಕಲೆಯ ಬಗ್ಗೆ ಈಗಾಗಲೇ ಹಲವಾರು ಲೇಖನಗಳು ಬಂದಿವೆ. ಡಾ.ಕೃಷ್ಣಾನಂದ ಕಾಮಂತರು ಚಿತ್ರಗಳಲ್ಲಿರುವ ಪೌರಾಣಿಕ ರಾಜಕೀಯ, ಸಾಮಾಜಿಕ ಅಂಶಗಳ ಬಗ್ಗೆ ದೀರ್ಘವಾದ ಲೇಖನವನ್ನು ಬರೆದಿದ್ದಾರೆ. ಡಾ. ವೀಣಾ ಶೇಖರ ಅವರು ಶಿಬಿಯ ಚಿತ್ರಗಳ ಕೈಪಿಡಿಯನ್ನು ಇಂಗ್ಲೀಷ್‌ನಲ್ಲಿ ಹೊರತಂದಿದ್ದಾರೆ. ಇಲ್ಲಿಯ ಚಿತ್ರಗಳ ಬಗ್ಗೆ ವಸ್ತುವಿನ ಬಗ್ಗೆ ಸಂಕ್ಷಿಪ್ತವಾಗಿ ನೋಡಬಹುದು. ಮುಖ್ಯ ಮಂಟಪದವನ್ನು ಒಂಬತ್ತು ಅಂಕಣಗಳಾಗಿ ವಿಂಗಡಿಸಿ ಅವುಗಳ ಚಿತ್ರಗಳ ಒಂದು ಅಡಿ ಚೌಕ ಆಕಾರದಲ್ಲಿ ರಚಿಸಿರುವುದಲ್ಲದೇ ಅಂಕಣಗಳನ್ನು ಬೇರ್ಪಡಿಸುವ ತೊಲೆಗಳ ಮೇಲೆಯೂ ಚಿತ್ರಿಸಿದೆ. ದೇವಕಿಯ ಏಳು ಮಕ್ಕಳನ್ನು ಕೊಂದ ಕಂಸ ಎಂಟನೆ ಮಗನನ್ನು ಕೊಲ್ಲಲು ತಯಾರಾಗಿರುವುದು ವಾಸುದೇವ ಮಗ ಕೃಷ್ಣನನ್ನು ಗೋಕುಲಕ್ಕೆ ಕರೆದೊಯ್ಯಲೇರುವುದು ಆರು ಅಂಕಣಗಳಲ್ಲಿ ಚಿತ್ರಿಸಿದೆ. ಯಶೋಧನ ಬಳಿ ಕೃಷ್ಣನನ್ನು ಇರಿಸಿ

ಆಕೆ ಪ್ರಸವಿಸಿದ ಮಗವನ್ನು ಕರೆತರುತ್ತಿರುವದು, ಕಂಸನು ಆಜ್ಞೆಯಂತೆ ಕೃಷ್ಣನು ಕೊಲ್ಲಲು ರಾಕ್ಷಸರು ಬರುವುದು. ಧೂತರ ಶಟಕಾಸುರ ಸಂಹಾರ ತ್ರಣಾವ್ರತ ರಾಕ್ಷಸ ಸಂಹಾರ ಬಲರಾಮನೊಂದಿಗೆ ಬೆಣ್ಣೆ ಕದಿಯುತ್ತಿರುವ ಹಾಗೂ ದಶಾವತಾರದ ಚಿತ್ರಗಳನ್ನು ಇಲ್ಲಿ ನೋಡಬಹುದು. ಹಸುವಿನ ರೂಪದಲ್ಲಿ ಬಂದ ವತ್ಸಾಸುರ ಸಂಹಾರ ಬಲರಾಮನಿಂದ ದೇವಕಾಸುರ ಸಂಹಾರ, ಹೆಬ್ಬಾವಿನ ರೂಪದ ಅಗನರನ್ನು ಉದರದೊಳಗೆ ಕೃಷ್ಣ ಹಾಗೂ ಆತನ ಗೆಳೆಯರು ಹೋಗಿ ಸರ್ಪವನ್ನು ಬಗೆದು ಕೊಲ್ಲುತ್ತಿರುವುದು ಬ್ರಹ್ಮ ತನ್ನ ವಶದಲ್ಲಿ ಇರಿಸಿಕೊಂಡಿದ್ದ ದನಕರುಗಳು ಹಾಗೂ ಗೋಪಾಲಕನನ್ನು (ಕೃಷ್ಣ) ಬಿಡಿಸಿಕೊಂಡು ಬಂದಿದ್ದು ಇತ್ಯಾದಿಗಳು ಚಿತ್ರಗಳು ಇಲ್ಲಿ ಕಾಣಬುದುದಾಗಿದೆ.

**ಭಿತ್ತಿ ಮಾಧ್ಯಮದಲ್ಲಿ ದಶವತಾರ ಚಿತ್ರಗಳು**

**೧. ಉತ್ತರ ಕರ್ನಾಟಕ**

೧. ನಿಪ್ಪಾಣಿ

೨. ಅಮ್ಮನಬಾವಿ

೩. ಬಿ.ಕೆ.ಹಳ್ಳಿ

೪. ಹಂಪಿ

೫. ಆನೆಗೊಂದಿ

೬. ಕರಾವಳಿ ಪ್ರದೇಶ

೭. ಬೀಳಗಿ

**೨. ಕರಾವಳಿ ಪ್ರದೇಶ**

೧. ಕುಮಟಾ

೨. ಕಡವಾಡ

೩. ಕೊಲ್ಲೂರು

೪. ಶಿರಸಿ

೫. ಶಿರಾಲಿ

೬. ಹೊನ್ನಾವರ

೭. ಹಳದಿಪುರ

**೩. ದಕ್ಷಿಣ ಕರ್ನಾಟಕ**

೧. ಶಿಬಿ

೨. ಮೈಸೂರು

೩. ಕರೆಗೋಡ

೪. ಬೆನಕನ ಕೆರೆ

೫. ಶ್ರವಣಬೆಳಗೋಳ

ಈ ಅಧ್ಯಾಯಕ್ಕೆ ಸಂಬಂಧಿಸಿದ ಉತ್ತರ ಕರ್ನಾಟಕದಲ್ಲಿ ಹಂಪಿ ಪ್ರದೇಶದ ಭಿತ್ತಿ ಚಿತ್ರದಲ್ಲಿ ದಶಾವತಾರದ ಚಿತ್ರಗಳ ಕುರಿತು ಅಧ್ಯಯನಕ್ಕೆ ಬಳಸಲಾಗಿದೆ. ಅದೇ ರೀತಿ ಕರಾವಳಿ ಪ್ರದೇಶದಲ್ಲಿ ಕುಮಟಾ ಹಾಗೂ ಹೊನ್ನಾವರ ಪ್ರದೇಶದ ಭಿತ್ತಿ ಚಿತ್ರಗಳನ್ನು ಚರ್ಚಿಸಲಾಗಿದೆ. ಹಾಗೂ ದಕ್ಷಿಣ ಕರ್ನಾಟಕ, ಮೈಸೂರು ಶಿಭಿ ಹೀಗೆ ಎರಡು ಪ್ರದೇಶದಲ್ಲಿ ಬರುವ ದಶಾವತಾರದ ಭಿತ್ತಿಗಳ ಕುರಿತು ಚರ್ಚಿಸಲಾಗಿದೆ.

**ಕರಾವಳಿ ಕಾವಿ ಭಿತ್ತಿಗಳ ದಶಾವತಾರದ ಚಿತ್ರಗಳು**

ದಶಾವತಾರದ ಚಿತ್ರಗಳಲ್ಲಿ ವಿಷ್ಣು, ಮತ್ಸಾವತಾರ, ಕೂರ್ಮಾವತಾರ, ವರಹಾವತಾರ, ನರಸಿಂಹವತಾರ, ಕೃಷ್ಣವತಾರ ಮತ್ತು ಬೌದ್ಧಾವತಾರ ಹಾಗೂ ಕಲ್ಕಿ ಅವತಾರದ ಚಿತ್ರಗಳನ್ನು ಕಾವಿ ಭಿತ್ತಿಚಿತ್ರಗಳಲ್ಲಿ ಚರ್ಚಿಸಲಾಗಿದೆ.

ಶ್ರೀ ಮನ್ನರಾಯಣನು ಭೂಮಿಯಲ್ಲಿ ಹತ್ತು ರೀತಿಯಿಂದ ಜನ್ಮ ಪಡೆದು ಪ್ರತಿಯುಗದಲ್ಲಿಯೂ ಒಂದೊಂದು ವಿಧದಲ್ಲಿ ಅವತಾರ ಹೊಂದಿದನು. ಇಲ್ಲಿ ಯಾವುದೇ ಅವತಾರಾವನ್ನು ಹೊಂದಿಬಂದರೂ ಕರುಣಾಳುಗಳಾದ ಶ್ರೀ ಹರಿಯು ಭಕ್ತರನ್ನು ಉದ್ಧಾರ ಮಾಡುವ ಅವತಾರ ಹೊಂದಿದವರಾಗಿದ್ದನು. ಧರ್ಮರಾಜನು ಸಹಜ ಕುತೂಹಲದಿಂದ ದಶಾವತಾರದ ಮಹಿಮೆಯ ಬಗ್ಗೆ ಮಾರ್ಕಂಡೇಯ ಮಹಿಷ್ಕಿಗಳನ್ನು ಕೇಳಿದಾಗ ಅವರು ವಿಸ್ತಾರವಾಗಿ ಹತ್ತು ಅವತಾರಗಳ ಬಗ್ಗೆ ವಿವರಣೆ ನೀಡಿದ್ದಾರೆ.[೧೦] ಈ ರೀತಿಯಲ್ಲಿ ತಮ್ಮ ಗುಣ ಅದರ ಪರಿಣಾಮವನ್ನು ನಿಯಂತ್ರಿಸುವುದು ಸತ್ವ ಗುಣಗಳನ್ನು ಉಳಿಸುವುದು ಶ್ರೀ ಹರಿಯ ಅವತಾರಗಳಲ್ಲಿನ ಮುಖ್ಯ ಕಾರ್ಯವೆನಿಸಿದೆ.

ಮತ್ಸ್ಯ ಕೂರ್ಮಾವರಾಹಶ್ಚ ನಾರಸಿಂಹಶ್ಚ ವಾಮನಃ

ಕಾಮೋರಾಮಶ್ಚ ಕೃಷ್ಣಶ್ಚ ಬುದ್ಧ ಕಲ್ಕಿ ನಮೋ ನಮಃ

ಶ್ರೀ ಹರಿಯು ಲೋಕ ಕಲ್ಯಾಣಕ್ಕಾಗಿ ಹತ್ತು ಅವತಾರಗಳನ್ನು ತಾಳಿದ ವಿವರಣೆಯನ್ನು ಈ ಶ್ಲೋಕವು ತಿಳಿಸುತ್ತದೆ. ಮತ್ಸ್ಯಾ, ಕೂರ್ಮಾ, ವರಾಹ, ನರಸಿಂಹ, ರಾಮ, ಪರಶುರಾಮ,

೧೦. ದಶಾವತಾರದ ಕಥೆಗಳು, ಶ್ರೀ. ಜಿ.ವಿ.ಶಾಸ್ತ್ರ, ಪುಟ.೧೦

ವಾಮನ, ಕೃಷ್ಣ, ಬುದ್ಧ ಮತ್ತು ಕಲ್ಕಿ ಇವು ಶ್ರೀಮನ್ ನಾರಾಯಣನ ಹತ್ತು ಅವತಾರಗಳಾಗಿವೆ.[೧೧] ಪರಬ್ರಹ್ಮ, ಸತ್ವಗುಣಕ್ಕೆ ಅಭಿಮಾನಿ ದೇವತೆ ವಿಷ್ಣುವು ಲೋಕರಕ್ಷಣೆಯ ಕಾರ್‍ಯವನ್ನು ನೋಡಿಕೊಂಡನು. ಬ್ರಹ್ಮನು ರಜೋಗುಣಾದ ದೇವತೆಯಾಗಿ ಸೃಷ್ಟಿಯ ಕಾರ್ಯ ಕೈಗೊಂಡನು. ಮಹೇಶ್ವರನು ತಪೋಗುಣದ ದೇವತೆಯಾಗಿ ನಾಶದ ಕಾರ್ಯವನ್ನು ನೋಡಿಕೊಂಡನು.

ವಿಷ್ಣುವಿನ ದಶಾವತಾರದ ಚಿತ್ರಗಳು, ಧರ್ಮವೂ ನಾಲ್ಕು ಪ್ರಾಥಮಿಕ ವಿಷಯಗಳನ್ನು ಒಳಗೊಂಡಿವೆ. ಅವುಗಳಿಂದ ಪುಣ್ಯ ಕರ್ಮಗಳಿಂದ ಕೂಡಿದ ಧಾರ್ಮಿಕ ಚಟುವಟಿಕೆಗಳು, ಆರ್ಥಿಕ ಅಭಿವೃದ್ಧಿ, ಇಂದ್ರೀಯಗಳ ತೃಪ್ತಿ ಹಾಗೂ ಅಂತಿಮವಾಗಿ ಐತಿಹಾಸಿಕವಾಗಿ ಪ್ರಪಂಚದ ಬಂಧನಗಳಿಂದ ಮುಕ್ತಿ ಅಧಾರ್ಮಿಕ ಜೀವನ ಒಂದು ಬರ್ಬರ ಸ್ಥಿತಿ. ಅಂತೆಯೇ ಧರ್ಮದೊಂದಿಗೆ ಮಾನವನ ಜೀವನವು ಪ್ರಾರಂಭವಾಗುತ್ತದೆ. ಆಹಾರ, ನಿದ್ರ, ಭಯ ಮತ್ತು ಮೃಥುನ ಇವು ಮೃಗೀಯ ಜೀವನದ ಅಧಿಕ ನಾಲ್ಕು ತತ್ವಗಳು. ಇವು ಮಾನವನವರಿಗೂ ಸಮಾನವಾದವು. ಆದರೆ ಧರ್ಮವು ಮಾನವನ ಅಧಿಕ ಕ್ರಿಯಾ ವಿಶೇಷ, ಹೀಗೆ ಭೌತಿಕ ಕ್ರಿಯ ಹದಿನಾರು ಮೂಲಭೂತ ದ್ರವ್ಯಗಳು ಮೊದಲು ಸೃಷ್ಟಿಯಾದವು. ಭೌತಿಕ ಜಗತ್ತಿನ ಸೃಷ್ಟಿಯ ಈ ಕ್ರಿಯೆಯ ಉದ್ದೇಶವಾಗಿತ್ತು. ಒಟ್ಟಾರೆ ಭೌತಿಕ ಸೃಷ್ಟಿಯಲ್ಲಿ ಮೂರು ಪುದಷಾಭಿ ವ್ಯಕ್ತಿಗಳಿವೆ. ಅವು ಕ್ರಮವಾಗಿ ಕಾರಣೋದಕಶಾಯೀ ವಿಷ್ಣು, ಗರ್ಭೋರಕಶಾಯೀ ವಿಷ್ಣು, ಕ್ಷೀರೋರಕಶಾಯೀ, ವಿಷ್ಣು ಎಂಬುದಾಗಿ ಪ್ರಸಿದ್ಧವಾಗಿವೆ.

ವಿಷ್ಣುವೇ ಮೊದಲನೆಯ ಪುರುಷ ಅವನ ರೂಪರೋಮ ರಂದ್ರಗಳಿಂದ ಅಸಂಖ್ಯಾತ ಬ್ರಹ್ಮಾಂಡಗಳು ಹೊರಹೊಮ್ಮುತ್ತವೆ. ಹಾಗೆ ಹೊಮ್ಮಿದ ಪ್ರತಿಯೊಂದು ಬ್ರಹ್ಮಾಂಡದಲ್ಲಿ ಪುರುಷನು ಗರ್ಭೋದಕಶಾಯೀ ವಿಷ್ಣುವಾಗಿ ಪ್ರವೇಶಿಸುತ್ತಾನೆ. ಆ ಭಾಗವೆಲ್ಲಾ ಅವನ ದೇವ ಜಲದಿಂದ ಪೂರಿತವಾಗಿದೆ. ಈ ಕಮಲ ಪುಷ್ಪವು ಸಕಲ ಜೀವಿಗಳ ತಂದೆಯಾದ ಬ್ರಹ್ಮನ ಜನ್ಮಸ್ಥಾನ, ಬ್ರಹ್ಮನಾದವೋ, ಬ್ರಹ್ಮಾಂಡದ ಸಂಪರ್ಕ ವ್ಯವಸ್ಥೆ ಮತ್ತು ನಿರ್ಮಾಣದಲ್ಲಿ ಮುಖವು ದುಂಬಿಗಳು ಹಾರಾಡುತ್ತಿರುವ ಕಮಲ ಪುಷ್ಪದಂತೆ ತೋರುತ್ತದೆ. ವಿಷ್ಣು ಧರಿಸಿರುವ ಸ್ವರ್ಣಾಭರಣಗಳ ಕಾಂತೀಯ ಅರುಣ ಕಾಗದ ಕರಗಿದ ಚಿನ್ನದಂತೆ ಉದಯಿಸುತ್ತಿರುವ ಸೂರ್ಯನಂತೆಯೇ ಭಗವಾನ್ ವಿಷ್ಣುವು ವಿಶ್ವವನ್ನೇ ಕಾಪಾಡುವ ಸಲುವಾಗಿ ಪ್ರತ್ಯಕ್ಷನಾಗುತ್ತಾನೆ. ಅವನ ಕೈಗಳಲ್ಲಿ ವಿವಿಧ ಆಯುಧಗಳಿವೆ. ಅವನ ಎಂಟೂ ಹಸ್ತಗಳನ್ನು ತಾವರೆಯ ಎಂಟು ಧಳಗಳಿಗೆ

---

೧೧. ದಶಾವತಾರದ ಕಥೆಗಳು, ಶ್ರೀ. ಜಿ.ವಿ.ಶಾಸ್ತ್ರ, ಪುಟ.೫

ವಿಷ್ಣುವಿನ ಚಿತ್ರಗಳು ಕರಾವಳಿಯ ಈ ಕೆಳಗಿನ ದೇಗುಲಗಳಲ್ಲಿ ಚಿತ್ರಿತಗೊಂಡಿವೆ.

ಶ್ರೀ ಮಹಾಳಸಾ, ನಾರಾಯಣ ದೇವಾಲಯ, ಕುಮಟಾ.

ಶ್ರೀ ಬಾಳಗೋಡು, ನೇತಾಕಾಮಚರಿತ್ರ ದೇವಾಲಯ, ಕಡವಾಡ

ಹೋಲಿಸಲಾಗಿದೆ.

**ಕಾವಿ ಚಿತ್ರಗಳ ದಶಾವತಾರದ ಕುರಿತು ಚರ್ಚಿಸಲಾಗಿದೆ.**

**ಮತ್ಸ್ಯಾವತಾರ ಚಿತ್ರ–೧**

ಮತ್ಸ್ಯಾವತಾರ ಚಿತ್ರಣವು ದಶಾವತಾರದ ಚಿತ್ರ ಸರಣಿಯಲ್ಲಿ ಮೊದಲನೆಯದು. ಮತ್ಸ್ಯಾವತಾರಕ್ಕೆ ಸಂಬಂಧಿಸಿದಂತೆ ಹೊರ ಭಿತ್ತಿಯಲ್ಲಿರುವ ಈ ಚಿತ್ರ ಕಾಲನ ತುಳಿತಕ್ಕೆ ಒಳಗಾಗಿ ಅಸ್ಪಷ್ಟವಾಗಿದ್ದರೂ ಬಾಹ್ಯ ಆಕಾರದಿಂದ ಮತ್ಸ್ಯಾವತಾರದ ಚಿತ್ರವೆಂದು ಗುರುತಿಸಬಹುದಾಗಿದೆ. ಚತುರ್ಭುಜಧಾರಿಯಾದ ವಿಷ್ಣುವು ತನ್ನ ದೇಹದ ಕೆಳಭಾಗದಲ್ಲಿ ಮತ್ಸ್ಯಾಕೃತಿಯನ್ನು ಹೊಂದಿದ್ದು ತನ್ನ ಎಡಭಾಗದ ಎರಡು ಕೈಗಳನ್ನು ರಾಕ್ಷಸರ ಸಂಹಾರಕ್ಕೆ ದುಡಿಸಿಕೊಂಡಿದ್ದಾನೆ. ಒಂದು ಕೈಯಲ್ಲಿ ರಾಕ್ಷಸನ ಜಡೆಯನ್ನು ಹಿಡಿದು ಇನ್ನೊಂದು ಕೈಯಲ್ಲಿ ಖಡ್ಗದಿಂದ ಅವನ ನೆತ್ತಿಯ ಮೇಲ್ಭಾಗದಲ್ಲಿ ತೋರಿಸಿದ್ದಾನೆ. ವೃತ್ತದಲ್ಲಿ ಕೀರ್ತಿಮುಖವಿದೆ. ಆವರಣದಲ್ಲಿ ಸಸ್ಯ ವಿನ್ಯಾಸ, ಹೂವುಗಳು ವಿನ್ಯಾಸವು ಎಂದಿನಂತೆ ಚಿತ್ರ ರಚನೆ ಮಾಡಿರುವುದು ಇಲ್ಲಿ ಕಾಣಬಹುದು.

**ಕೂರ್ಮಾವತಾರ ಚಿತ್ರ–೨**

ದೇವಾಲಯದ ಕೂರ್ಮಾವತಾರದ ಚಿತ್ರವು ಅಲಂಕಾರಿಕ ದೃಷ್ಟಿಯಿಂದ ಸಾಂಪ್ರದಾಯಿಕ ದೃಷ್ಟಿಯಿಂದ ಗಂಭೀರವಾದದು. ಹಿಂದಿನ ಚಿತ್ರದಲ್ಲಿ ಕೂರ್ಮಾದ ದೇಹ ಮಾತ್ರ ಚಿತ್ರಿತಗೊಂಡಿರುವುದು. ಈ ಚಿತ್ರದಲ್ಲಿ ಪೂರ್ಣ ಕೂರ್ಮಾವತಾರದ ಚಿತ್ರರಚನೆಗೊಂಡಿದೆ. ಕೂರ್ಮಾದ ಬಾಯಿಯಿಂದ ಅವತಾರವೆತ್ತಿದ ಶ್ರೀ ಹರಿಯ ಧಾನವನ ಶಿರದ ಮೇಲೆ ಜಡೆಯನ್ನು ತನ್ನ ಎಡಗಾಲಿನಿಂದ ಭಿತ್ತಿ ಹಿಡಿದು ಎಡಗೈಯಿಂದ ಎಳೆದಿದ್ದಾನೆ. ಆದರೆ ಹಿಂದಿನ ಶ್ರೀ ಹರಿಯ ಕೈಯಲ್ಲಿ ಭರ್ಚಿಯು ಇದ್ದರೆ, ಈ ಚಿತ್ರದ ಶ್ರೀ ಹರಿಯ ಕೈಯಲ್ಲಿ ಅಂತಹ ಯಾವುದೇ ಆಯುಧಗಳು ಕಂಡುಬರುವುದಿಲ್ಲ. ಶ್ರೀಹರಿಯು ಎಂದಿನಂತೆ ತನ್ನೆರಡು ಕೈಯಲ್ಲಿ ಶಂಖ ಮತ್ತು ಚಕ್ರಗಳನ್ನು ಈ ಚಿತ್ರರಚನೆಯಲ್ಲಿ ಕಾಣಬಹುದು.

---

ವಿಷ್ಣುವಿನ ಚಿತ್ರಗಳು ಕರಾವಳಿಯ ಈ ಕೆಳಗಿನ ದೇಗುಲಗಳಲ್ಲಿ ಚಿತ್ರಿತಗೊಂಡಿವೆ.

ಶ್ರೀ ಮಹಾಳಸಾ, ನಾರಾಯಣ ದೇವಾಲಯ, ಕುಮಟಾ.

ಶ್ರೀ ಬಾಳಗೋಡು, ನೇತಾಕಾಮಚರಿತ್ರ ದೇವಾಲಯ, ಕಡವಾಡ

ಶ್ರೀ ಮೂಕಾಂಬಿಕಾ ದೇವಸ್ಥಾನ, ಕೊಲ್ಲೂರು.

ಶ್ರೀ. ಮಾರಿಕಾಂಬಾ ದೇವಸ್ಥಾನ, ಶಿರಸಿ.

ಶ್ರೀ ಗೋಪಿನಾಥ ವೆಂಕಟರಮಣ ದೇವಾಲಯ, ಹಳದಿಪುರ

ಶ್ರೀ ಮಾರುತಿ ದೇವಾಲಯ ಹೊನ್ನಾವರ.

**ವರಾಹಾವತಾರ ಚಿತ್ರ-೩**

ದೇವಾಲಯದ ವರಾಹಾವತಾರ ಈ ಚಿತ್ರದಲ್ಲಿ ೧, ೨ ಮತ್ತು ೩ರಂತೆ ವರಾಹದಿಂದ ವಿಷ್ಣು ಅವತರಿಸಿಲ್ಲ. ಬದಲಾಗಿ ದೇಹವೆಲ್ಲ ಮಾನವಾಕೃತಿಯಂತೆ ರಚಿತವಾದರೆ ಶಿರಭಾಗ ಮಾತ್ರ ವರಾಹನದು. ಹೀಗಾಗಿ ಇತರ ಮೂರು ಚಿತ್ರಗಳಿಗಿಂತ ಅನನ್ಯವಾದ ಕೃತಿಯಿದು. ವಿಷ್ಣು ದಾನವನನ್ನು ಮೆಟ್ಟಿ ನಿಂತು ಎಡಗೈಯಲ್ಲಿ ಜುಟ್ಟನ್ನು ಹಿಡಿದು ಅಭಯ ಮುದ್ರೆಯನ್ನು ತೋರಿಸಿದ್ದಾನೆ. ಹಿಂದಿನ ಮೂರು ಚಿತ್ರಗಳಲ್ಲಿ ಅಭಯಮುದ್ರೆ ಇರದೇ ಖಡ್ಗವನ್ನು ವಿಷ್ಣು ಹಿಡಿದಿದ್ದು ತೋರಿಸಿದ್ದಾನೆ. ಆದರೆ ಈ ಚಿತ್ರದಲ್ಲಿ ವಿಷ್ಣು ಖಡ್ಗವನ್ನು ಹಿಡಿಯದೇ ಅಭಯ ಮುದ್ರೆಯನ್ನು ಹೊಂದಿರುವುದರಿಂದ ವಿಷ್ಣುವಿಗೆ ದಾನವನ್ನು ಸಂಹರಿಸಬೇಕೆಂಬ ಉದ್ದೇಶ ಈ ಚಿತ್ರದಲ್ಲಿ ಕಂಡುಬರುತ್ತದೆ.

**ನರಸಿಂಹಾವತಾರ ಚಿತ್ರ-೪**

ದೇವಾಲಯದ ಪ್ರಕಾರ ಒಳಭಿತ್ತಿಯಲ್ಲಿ ಚಿತ್ರಿತಗೊಂಡು, ಈ ಚಿತ್ರ ಕಾವಿಚಿತ್ರದ ಪ್ರಭಾವವನ್ನು ಉಳಿಸಿಕೊಂಡು, ಆಧುನಿಕ ರಚನಾ ಪದ್ಧತಿಯನ್ನು ಚಿತ್ರಿತಗೊಂಡ ಚಿತ್ರವಿದ್ದು, ಹಿಂದಿನ ಬಹುತೇಕ ಚಿತ್ರಗಳಲ್ಲಿ ವಿಷ್ಣು ಆಯಾ ಅವತಾರಗಳಿಗೆ ಸಂಬಂಧಪಟ್ಟ ಪ್ರಾಣಿಗಳ ವದನದಲ್ಲಿ ಅವತರಿಸಿದ್ದರೆ, ಈ ಚಿತ್ರದಲ್ಲಿ ಸಿಂಹದ ಮುಖವನ್ನೇ ಹೊತ್ತುಕೊಂಡು ಅವತರಿಸಿ ಹಿರಣ್ಯಕಶಪನ ಉದರವನ್ನು ಬಗೆಯುವುದರ ಮೂಲಕ ಅವನ ಪ್ರಾಣವನ್ನು ತೆಗೆಯುವ ಉಗ್ರ ಸ್ವರೂಪ ಅಭಿವ್ಯಕ್ತಿಯ ಚಿತ್ರವಿದ್ದು, ಮೊದಲಿಗೆ ಹೇಳಿದಂತೆ ತೀರ ಇತ್ತೀಚಿನ ರಚನೆಯಾಗಿರುವುದರಿಂದ ಚಿತ್ರ ರಚನೆಯ ಸಂಪ್ರದಾಯಗಳನ್ನು ಮೀರಿದ್ದು, ಈ ಚಿತ್ರದಲ್ಲಿ ಚತುರ್ಭುಜಧಾರಿಯಾಗಿರುವ ನರಸಿಂಹ ಸಾಲಂಕೃತಧಾರಿಯಾಗಿದ್ದು, ಅವನ ಕಿರೀಟವು ಇತರ ಕಾವಿ ಚಿತ್ರಗಳಿಗಿಂತ ಭಿನ್ನವಾಗಿದೆ. ಎದೆ, ಹಾರಗಳೆಲ್ಲವೂ ಇತ್ತೀಚಿನ ಯಕ್ಷಗಾನದ ಅಲಂಕಾರಿಕ ಆಭರಣಗಳನ್ನೇ ಹೋಲುತ್ತವೆ ಈ ಚಿತ್ರ, ಆದರೆ ಹಿಂದಿನ ಬಹುತೇಕ ಕಾವಿ ಚಿತ್ರಗಳಲ್ಲಿ ಸ್ಥಳಾವಕಾಶವನ್ನು ಕಲಾವಿದ ದುಡಿಸಿಕೊಳ್ಳದೇ ಹಾಗೆಯೇ ಬಿಟ್ಟಿರುವುದರಿಂದ ಚಿತ್ರದ ಸ್ಪಷ್ಟತೆ ಪ್ರಖರವಾಗಿದೆ.

**ನರಸಿಂಹಾವತಾರದ ಚಿತ್ರ-೫**

ಎರಡನೆಯ ಸಾಲಿನಲ್ಲಿ ಬಲಗಡೆಗೆ ಒಂದು ಚಿತ್ರವಿದ್ದು ತುಂಬಾ ಅಸ್ಪಷ್ಟವಾಗಿ ಕಂಡುಬರುತ್ತದೆ. ಅಲ್ಲದೆ, ಸ್ಥಳೀಯರ ಪ್ರಕಾರ ಅವನ್ನು ನರಸಿಂಹ ಎನ್ನಲಾಗುತ್ತದೆ. ಎಡಗಡೆಯ ಚಿತ್ರವೂ ಸಹ

---

ಶ್ರೀ ಗೋಪಿನಾಥ ವೆಂಕಟರಮಣ ದೇವಾಲಯ, ಹಳದಿಪುರ

ಶ್ರೀ ಮಾರುತಿ ದೇವಾಲಯ ಹೊನ್ನಾವರ.

ಭಾಗದಲ್ಲಿ ವೃತ್ತಾಕಾರದ ಒಂದು ಅಲಂಕಾರಿಕ ನಕ್ಷೆಯಿದ್ದು, ಇದು ಉತ್ತಮ ಮಟ್ಟದಲ್ಲಿ ರಚನೆಗೊಂಡಿದೆ ಎನ್ನಬಹುದು.

ಹೀಗೆ ಈ ಭಿತ್ತಿಚಿತ್ರಗಳಲ್ಲಿ ಹೆಚ್ಚಿನ ಪ್ರಮಾಣದ ಚಿತ್ರಗಳು ಪೌರಾಣಿಕ ಕಥಾ ನಿರೂಪಣೆಗೆ ತಕ್ಕಂತೆ ಮೂಡಿ ಬಂದಿವೆ. ಇನ್ನೂ ಕೆಲವು ಚಿತ್ರಗಳು ಐತಿಹಾಸಿಕ ಘಟನಾಧಾರಿತವಾಗಿವೆ. ಇನ್ನು ಕೆಲವು ಚಿಕಣಿ ಚಿತ್ರಗಳ ಮಾದರಿಯಲ್ಲಿ ರಚನೆಗೊಂಡಿದ್ದು ಕೆಲವು ಚಿತ್ರಗಳು ತುಂಬಾ ಅಸ್ಪಷ್ಟವಾಗಿ ಕಾಣಿಸುವುದರಿಂದ ವಿಷಯವನ್ನು ಗ್ರಹಿಸಲು ಪ್ರಯಾಸಪಡಬೇಕಾಗುತ್ತದೆ. ಇಲ್ಲಿಯ ಚಿತ್ರಗಳು ಶಿಷ್ಟವಾಗಿ ರಚನೆಯನ್ನು ಹೊಂದಿದ್ದರೂ ಸಹ ಕೆಲವು ಅಂಶಗಳು ಜಾನಪದೀಯ ವಾಗಿರುವುದನ್ನು ಅಲ್ಲಗೆಳೆಯುವಂತಿಲ್ಲ. ಹೀಗಾಗಿ ಈ ಚಿತ್ರಗಳನ್ನು ಸಮ್ಮಿಶ್ರಣ ಮಾದರಿ ಚಿತ್ರಗಳು ಎಂದು ಕರೆಯುವುದು ಸೂಕ್ತವಾಗಿದೆ. ಒಟ್ಟಿನಲ್ಲಿ ಇಲ್ಲಿಯ ಚಿತ್ರಗಳು ಕಲಾವಿದನೊಬ್ಬನ ಕಲ್ಪನಾಚಾತುರ್ಯದ ಶ್ರೇಷ್ಠತೆಯನ್ನು ಸಾರುತ್ತದೆ. ಇಲ್ಲಿ ಸೃಜನಾತ್ಮಕತೆಯಿದೆ, ಚಿತ್ರ ರಚನಾ ಕೌಶಲ್ಯವಿದೆ. ವರ್ಣಗಳ ಬಗೆಗಿನ ಜ್ಞಾನವಿದೆ. ವರ್ಣ ಸಂಯೋಜನೆಯನ್ನು ಕಲಾವಿದ ಇಲ್ಲಿ ಯಶಸ್ವಿಯಾಗಿ ನಿರ್ವಹಿಸಿದ್ದಾನೆ. ಎಂದು ಹೇಳಬಹುದು. ಇದು ಕಲಾವಿದನೊಬ್ಬನ ಕಲಾಮನೋಭಾವವನ್ನು ಆತನ ಸೌಂದರ್ಯ ಪ್ರಜ್ಞೆಯನ್ನು ಪ್ರತಿಬಿಂಬಿಸುತ್ತದೆ. ಅಲ್ಲದೆ, ವಿಜಯನಗರ ಚಿತ್ರಕಲಾವಿದ ಒಬ್ಬ ಶ್ರೇಷ್ಠ ಕಲಾವಿದನಾಗಿದ್ದನೆಂಬುದು ಇದರಿಂದ ಕಂಡುಕೊಳ್ಳಲಾಗಿದೆ.

**ಪರಶುರಾಮಾವತಾರ ಚಿತ್ರ–೬**

ದೇವಾಲಯದ ಪರಶುರಾಮನ ಅವತಾರವು ರೌದ್ರ ನರ್ತನವನ್ನು ಹೊಂದಿದೆ. ಒಂದನೆಯ ಚಿತ್ರದಲ್ಲಿ ಪರಶುರಾಮನು ತನ್ನ ಬಲಹಸ್ತದಲ್ಲಿ ಆಯುಧವನ್ನು ಹಿಡಿದಿದ್ದರೆ ಈ ಚಿತ್ರದಲ್ಲಿ ತನ್ನ ಎಡಹಸ್ತದಲ್ಲಿ ಆಯುಧವನ್ನು ಹಿಡಿದಿದ್ದಾನೆ. ಆ ಆಯುಧವನ್ನು ದಿಟ್ಟಿಸಿ ನೋಡುತ್ತಲೇ ತನ್ನ ರೌದ್ರ ಭಾವನೆಯನ್ನು ಪ್ರಚೋದಿಸುತ್ತಿದ್ದಾನೆ. ಎಂದಿನಂತೆ ಕಲಾವಿದ ಚಿತ್ರದ ಹಿನ್ನೆಲೆಯಲ್ಲಿನ ಸ್ಥಳಾವಕಾಶವನ್ನು ಹೂವಿನಂತಹ ವಿನ್ಯಾಸಗಳ ಮೂಲಕ ಅಲಂಕಾರಿದ ಅಪೇಕ್ಷೆಯಿಂದ ದುಡಿಸಿಕೊಂಡಿದ್ದಾನೆ. ಹೂವಿನ ದಳದಂತಹ ವಿನ್ಯಾಸದಿಂದ ರಚಿತಗೊಂಡಿರುವ ಚಿತ್ರದ ಅಂಚುಪಟ್ಟಿ, ಮೇಲ್ಭಾಗದಲ್ಲಿ ಕಲಶವಿದ್ದು, ಚಿತ್ರದ ಒಪ್ಪಂದಕ್ಕೆ ಪೂರಕವಾಗಿದೆಯಲ್ಲದೆ ಹಿಂದಿನ ಕಾವಿ ಚಿತ್ರ ಶೈಲಿಯಲ್ಲಿ ಚಿತ್ರ ರಚನೆಯಾಗಿದೆ.

**ರಾಮಾವತಾರ ಚಿತ್ರ–೭**

ದೇವಾಲಯದ ರಾಮಾವತಾರದ ಚಿತ್ರದಲ್ಲಿ ರಾವಣ ಹತ್ತು ತಲೆಯನ್ನು ಹೊಂದಿದ್ದು, ಅವನು ರಾಮ ಲಕ್ಷ್ಮಣರತ್ತ ಬಿಲ್ಲನ್ನು ಹೆರೆಗೇರಿಸಿ ಕಾದಾಡುವ ದೃಶ್ಯವನ್ನು ಒಳಗೊಂಡಿದೆ. ಈ ಚಿತ್ರ ಅಲಂಕಾರಿಕ ಕುಶಲತೆಯಿಂದ ಚಿತ್ರರಚನೆ ಮಾಡಲಾಗಿದೆ. ನಶಿಸಿಹೋದ ಚಿತ್ರಕ್ಕೆ ಇತ್ತೀಚಿನ

ಕಲಾವಿದರು ಬಿಳಿ ಕಲಾವಿದರು ಬಿಳಿ ವರ್ಣದಿಂದ ರೇಖೆಯನ್ನು ಎಳೆದಿದ್ದು, ರಾವಣನ ಕೆಳಭಾಗದಲ್ಲಿ ಕಿಟಕಿಯೊಂದನ್ನು ನಿರ್ಮಿಸಿದ್ದು, ಜೊತೆಗೆ ಪ್ರಕೃತಿಯ ವೈಪರಿತ್ಯಗಳಿಂದ ಚಿತ್ರ ಅಸ್ಪಷ್ಟವಾಗಿರುವ ಹಿನ್ನೆಲೆಯಲ್ಲಿ ಈ ಕಾಪಿ ವಿವರಕ್ಕೆ ದಕ್ಕದೇ ಇದ್ದರೆ, ಎರಡನೆಯ ಚಿತ್ರದಲ್ಲಿ ರಾಮಾವತಾರನ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿಯನ್ನು ಇಲ್ಲಿ ನೀಡಲಾಗಿದೆ.

### ಕೃಷ್ಣವತಾರ ಚಿತ್ರ–೮

ದೇವಾಲಯದ ಹೊರ ಭಿತ್ತಿಯಲ್ಲಿರುವ ಕಾಳಿಂಗ ಮರ್ದನನ ಕೃಷ್ಣ ಹಿಂದಿನ ಚಿತ್ರದ ಶೈಲಿಯಂತಿಯೇ ಇಲ್ಲಿಯೂ ಪುನರಾವರ್ತನೆಯಾಗಿದ್ದಾನೆ. ಆದರೆ ಒಟ್ಟು ಚಿತ್ರದ ಸಂಯೋಜನೆ ವಿಭಿನ್ನವಾಗಿದೆ. ಹಿಂದಿನ ಚಿತ್ರದಂತೆಯೇ ಕೃಷ್ಣ ತನ್ನ ಎಡಗಾಲನ್ನು ಸರ್ಪದ ಹೆಡೆಯ ಮೇಲಿಟ್ಟು ಬಲಪಾದವನ್ನು ದೇಹದ ಮೇಲೆ ಮೆಟ್ಟಿ ಬಲಹಸ್ತದಲ್ಲಿ ಸರ್ಪದ ಬಾಲ, ಎಡಹಸ್ತದಲ್ಲಿ ವಿಷ್ಣು ಚಕ್ರವನ್ನು ಹಿಡಿದಿದ್ದಾನೆ. ಭರತನಾಟ್ಯ ಶೈಲಿಯನ್ನು ಹೊಂದಿರುವ ಇಲ್ಲಿನ ಕೃಷ್ಣ ಧರಿಸಿದ ಆಭರಣಗಳೆಲ್ಲವೂ ಚಿತ್ರದ ಚೌಕಟ್ಟಿನಲ್ಲಿ ಜ್ಯಾಮಿತಿಕ ನಕ್ಷೆಗಳು ಇದ್ದು ಮೇಲ್ಭಾಗದ ಗೋಪುರ, ಮುಸ್ಲಿಂ ವಾಸ್ತುಶಿಲ್ಪ ಶೈಲಿಯನ್ನು ಹೊಂದಿದ್ದು ಒಳಗಿನ ಪಟ್ಟಿಕೆಯಲ್ಲಿ ಹಿಂದೂ ವಾಸ್ತುಶಿಲ್ಪದ ಎಲೆಯಾಕಾರದ ವಿನ್ಯಾಸಗಳನ್ನು ರಚನೆಗೊಂಡಿರುವುದು ಈ ಚಿತ್ರದಲ್ಲಿ ಕಂಡುಬರುತ್ತದೆ.

### ಬೌದ್ಧವತಾರ ಚಿತ್ರ–೯

ದೇವಾಲಯದ ಹೊರಭಿತ್ತಿಯಲ್ಲಿರುವ ಬುದ್ಧನ ಚಿತ್ರವು ದಿಗಂಬರ ಸ್ಥಿತಿಯಲ್ಲಿದ್ದು ಚಿತ್ರ ಎರಡರಂತೆ ಇವನ್ನು ಕೂಡ ವಿಶಾಂತ ಸ್ಥಿತಿಯಲ್ಲಿದ್ದಾನೆ. ಆದರೆ ಬೇರೆ ಭಂಗಿಯಲ್ಲಿ ಸರ್ವಾಲಂಕೃತಧಾರಿಯಾದ ಬುದ್ಧನು ತನ್ನೆರಡು ಹಸ್ತಗಳನ್ನು ಸೊಂಟಕ್ಕೆ ಇಟ್ಟಿದ್ದು ಅವನ ಎರಡು ಕಾಲುಗಳ ಸಾವಧಾನ ಸ್ಥಿತಿಯಲ್ಲಿವೆ. ಸೂಕ್ಷ್ಮ ಕುಶಲತೆಯಿಂದ ಕೂಡಿದ್ದು, ಅವನ ಕಿರೀಟ, ಕೀರಿಟಕ್ಕೆ ಹೊಂದಿಕೊಂಡಂತಿರುವ ಹಾರ, ಹಾರದಿಂದ ಪಾರ್ಶ್ವಗಳೆರಡರಲ್ಲಿ ಗಧೆಯಿಂತಹ ವಿನ್ಯಾಸಗಳು ಇವೆ. ಅವುಗಳ ಮೇಲ್ತುದಿಯಲ್ಲಿ ಎರಡು ಅಲಂಕಾರಿಕ ಶೈಲಿಯ ಗಿಳಿಗಳು ಹಿಮ್ಮುಖವಾಗಿ ಚಿತ್ರಿತಗೊಂಡಿವೆ. ಇವು ಒಂದೇ ಬಗೆಯಿಂದ ಪರಸ್ಪರ ದಿಕ್ಕಿನಲ್ಲಿ ರೇಖಾಲಾಲಿತ್ಯದಿಂದ ರಚನೆಗೊಂಡಿವೆ.

### ಕಲ್ಕಿವತಾರ ಚಿತ್ರ–೧೦

ವಿಷ್ಣುವಿನ ದಶಾವತಾರದಲ್ಲಿ ಹತ್ತನೆಯ ಅವತಾರವಾಗಿರುವ ಕಲ್ಕಿಯವತಾರ, ದೇವಾಲಯದ ಹೊರಭಿತ್ತಿಯಲ್ಲಿರುವ ಈ ಚಿತ್ರದಲ್ಲಿ ಕಲ್ಕಿ ಅಶ್ವದ ಜೊತೆಗೆ ಸಂಭಾಷಿಸುತ್ತಿರುವಂತೆ ರಚನೆಯಾಗಿವೆ. ಸರ್ವಾಲಂಕೃತಧಾರಿಯಾದ ಕಲ್ಕಿಯ ಶಿರಸ್ತ್ರಾಣವೂ ಸೇರಿದಂತೆ ಅವನ ಆಭರಣಗಳಲ್ಲಿ ವೃತ್ತಾಕಾರದ ವಿನ್ಯಾಸಗಳು ಮೂಡಿದ್ದು, ಕಲ್ಕಿಯ ವಾಹನವಾದ ಅಶ್ವದ ಅಲಂಕಾರವೂ ರೇಖೆಗಳಿಂದ

ರಚಿತಗೊಂಡಿದೆ. ಅಶ್ವ ತನ್ನ ಬಾಲವನ್ನು ಸಂಪೂರ್ಣವಾಗಿ ಮೇಲಕ್ಕೆತ್ತಿ ಹಿಡಿದಿದ್ದು, ಸಂಜ್ಞೆಗಳನ್ನು ಅಲಿಸುತ್ತಿರುವಂತೆ ಭಾಸವಾಗುತ್ತಿದೆ. ಒಟ್ಟು ಸ್ಥಳಾವಕಾಶದಲ್ಲಿ ತರುಲತೆಗಳು ಅತ್ಯಂತ ಅಲಂಕೃತ ಶೈಲಿಯಲ್ಲಿ ರಚನೆಗೊಂಡಿರುತ್ತವೆ.

ಹೀಗೆ ದಶಾವತಾರದ ಹತ್ತು ಅವತಾರಗಳನ್ನು ದೃಶ್ಯಾತ್ಮಕವಾಗಿ ಪ್ರತಿನಿಧಿಸುವ ಚಿತ್ರಗಳನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ. ಹತ್ತಾರು ಶೈಲಿಯಲ್ಲಿ ಜನ್ಮ ವೆತ್ತಿದ ಕಾವಿ ಭಿತ್ತಿಚಿತ್ರಗಳನ್ನು ಆಯಾ ದೇಗುಲ ಮಠಮಾನ್ಯಗಳನ್ನು ಧಾರ್ಮಿಕ ನೆಲೆಯಲ್ಲಿ ಅಲಂಕೃತಗೊಳಿಸಿವೆ. ಪ್ರಹ್ಲಾದನು ತನ್ನ ತಂದೆ ಹಿರಣ್ಯಕಶ್ಯಪುವಿಗೆ ನಾರಾಯಣನು ಎಲ್ಲೆಲ್ಲಿಯೂ ಇದ್ದಾನೆ ಎಂದು ಹೇಳುವ ಕಲ್ಪನೆ ಹಾಗೂ ಉಕ್ತಿಯಂತೆ ಕರಾವಳಿಯ ಬಹುತೇಕ ಎಲ್ಲಾ ದೇವಾಲಯಗಳ ಕಾವಿ ಚಿತ್ರಗಳಲ್ಲಿ ಭಗವಂತನ ಅಂಶವನ್ನು ಕಾಣಬಹುದಾಗಿದೆ. ಹೀಗೆ ದೇವಾಲಯಗಳ ಭಿತ್ತಿಯನ್ನು ಅಲಂಕರಿಸುವ ಧಾರ್ಮಿಕ ಚಿತ್ರಗಳಿಂದ ಆಸ್ತಿಕರು ದೈವದ ಕಾರಣವಾಗಿ ಚಿತ್ರಗಳು ರಚನೆಯಾಗಿರುವುದು ನಾಸ್ತಿಕರು ದೃಶ್ಯಾತ್ಮಕ ರಸಾನುಭವವನ್ನು ಆಸ್ವಾದಿಸಲು ಈ ಕಾವಿ ಭಿತ್ತಿಚಿತ್ರಗಳು ಕಾರಣವಾಗಿರುತ್ತವೆಯಯಲ್ಲದೇ ನಮ್ಮ ನಡುವಿನ ಮಹತ್ವದ ಚಿತ್ರ ಪರಂಪರೆಯಾಗಿ ಉಳಿದ ಬೇಕಾದುದರ ಅವಶ್ಯಕತೆ ಇದೆ ಎಂದು ಹೇಳಬಹುದಾಗಿದೆ.

## ಅಧ್ಯಾಯ ೪

# ಹಸ್ತಪ್ರತಿ ಮಾಧ್ಯಮದ ದಶಾವತಾರದ ಚಿತ್ರಗಳು

ಕರ್ನಾಟಕಕ್ಕೆ ವೈಶಿಷ್ಟ್ಯವೆನಿಸಿರುವ ಹಾಗೂ ಮತ್ತೆಲ್ಲಿಯೂ ಕಾಣಸಿದ ತಾಳೆಗರಿಗಳ ಮೇಲಿನ ಚಿತ್ರಗಳ ಪರಿಚಯ ಪಡೆಯುವ ಮೊದಲು, ಕರ್ನಾಟಕದ್ದೇ ಆದ ಈ ಕಲಾ ಶೈಲಿಯೊಂದು ರೂಪುಗೊಂಡು ಬೆಳೆದುಬಂದ ರೀತಿಯ ಸಿಂಹಾವಲೋಕನ ಮಾಡುವುದು ಅಪ್ರಸ್ತುತವಾಗಲಾರದು. ನಮ್ಮ ಕರ್ನಾಟಕದ ಭವ್ಯ ನಾಗರಿಕತೆಯ ಶ್ರೇಷ್ಠ ಕಲಾ ಇತಿಹಾಸ ಸೃಷ್ಟಿಯಲ್ಲಿ ಸೌಂದರ್ಯ ಭೋಧನೆಯ ಉದ್ದೇಶಕ್ಕಾಗಿ ನಾಡಿನ ಚಿತ್ರ ಕಲಾವಿದರು ಘನವೆತ್ತ ರಾಜಮನೆತನಗಳ ಕೃಪಾಛತ್ರದಡಿಯಲ್ಲಿ ಹೇಗೆ ತಮ್ಮ ಕಲಾಪ್ರತಿಭೆಯನ್ನು ಬೆಳಗಿಸಿದರೆಂಬುದನ್ನು ಅರಿತುಕೊಳ್ಳಬೇಕು.[೧]

ಕರ್ನಾಟಕದ ಚಿತ್ರಕಲಾ ಪರಂಪರೆಯು ಶಾತವಾಹನರ ಕಾಲಕ್ಕಿಂತ ಮುಂಚಿನಿಂದಲೂ ನಡೆದುಬಂದುದರ ಕುರುಹಗಳನ್ನು ಮತ್ತು ತಲುಪಿದ ಅಜಂತೆಯ ೯ ಮತ್ತು ೧೦ನೆಯ ಗವಿಗಳಲ್ಲಿ ರಚಿತವಾದ ಚಿತ್ರಗಳಿಂದ ಅಳೆಯಬಹುದು. ಅಲ್ಲಿನ ಚಿತ್ರಗಳ ಭಾವ, ಭಂಗಿ, ಮುದ್ರೆಗಳು, ಕೇಶಾಲಂಕಾರ, ಉಡಿಗೆ-ತೊಡಗೆ, ಆಭರಣ, ಗಿಡ, ಮರ, ಬಳ್ಳಿ ಇವೆಲ್ಲವೂ ಕಲಾವಿದ ಸಾಧಿಸಿದ ಸಿದ್ಧಿಯನ್ನು ಎತ್ತಿ ತೋರಿಸುತ್ತವೆ. ದಶಾವತಾರದ ಚಿತ್ರ ಮತ್ತು ದೃಶ್ಯವನ್ನು ಬಹು ಸುಂದರವಾಗಿ ಒಡಮೂಡಿಸಿರುವುದು ತೆಳುನೀಲಿ ಮತ್ತು ಹಸಿರು ವರ್ಣಗಳಿಂದ ಚಿತ್ರಿಸಲಾಗಿದೆ.[೨]

---

೧. ಡಾ. ಬಿ.ಕೆ.ಹಿರೇಮಠ, ಕನ್ನಡ ಹಸ್ತಪ್ರತಿಗಳು, ಪುಟ.೧೬೫

೨. ಸುರೇಶ ಬಡಿಗೇರ, ಕನ್ನಡ ವಿಶ್ವವಿದ್ಯಾಲಯದ ಹಂಪಿಯಲ್ಲಿರುವ ಹಸ್ತಪ್ರತಿ ಚಿತ್ರಕಲೆ, ಪುಟ.೩೦

ವೇದಗಳ ಕಾಲಕ್ಕೆ ಅನೇಕ ಸಾಹಿತ್ಯ ಅಂಶಗಳನ್ನು ಬರೆದಿಡಲು ತಾಳೆಗರಿಯನ್ನು ಸೃಷ್ಟಿಸಿ ವುಗಳ ಮೇಲೆ ಅನೇಕ ಲಿಪಿ ಹಾಗೂ ಚಿತ್ರಗಳನ್ನು ಬರೆಯುವ ಸಾಹಸಕ್ಕೆ ುಂದಾಗುವಂತಾಯಿತು. ಇವೆ ಮುಂದೆ ಹಸ್ತಪ್ರತಿ ಚಿತ್ರಕಲೆಗಳಾಗಿ ಬೆಳಕಿಗೆ ಬಂದವು. ವುಗಳ ರೂಪ, ಸ್ವರೂಪ ಇತ್ಯಾದಿಗಳನ್ನು ಕೆಳಗಿನಂತೆ ವಿವರಿಸಬಹುದಾಗಿದೆ.

ಕಲೆಯು ಜೀವ ವಿಕಾಸದಲ್ಲಿ ಮಾನವನೊಂದಿಗೆ ಇದ್ದು ಅವನೊಂದಿಗೆ ಬೆಳೆದು ಬಂದ ್ರಕೃತಿ ಮೂಲವಾದುದ್ದಾದರೇ, ಕಾಲಘಟ್ಟದ ಅಂತರದಲ್ಲಿ ಬರುವ ಸಾಹಿತ್ಯ ವಿಕಾಸವು ಾನವನ ಬುದ್ದಿ ಜನ್ಯವಾದುದ್ದಾಗಿದೆ. ಕಲೆ ಮತ್ತು ಸಾಹಿತ್ಯಗಳು ಮೂಲದಲ್ಲಿ ವಿಭಿನ್ನ ೇತ್ರಗಳಾಗಿ ಕಂಡರೂ, ಅವುಗಳ ವಿಭಿನ್ನವಾದ ಭಾವಭಿವ್ಯಕ್ತಿಯ ಮಾಧ್ಯಮದ ನೆಲೆಗಳಾಗಿವೆ. ದಿಮಾನವನ ಬದುಕು ಹೋರಾಟ ಉಳಿವಿಕೆಯ ಸಂಕಲ್ಪಗಳ ಅಭಿವ್ಯಕ್ತಿಗೊಂಡು ಮಾಧ್ಯಮವಾಗಿ ಳೆದುಬಂದಿದ್ದು ಚಿತ್ರಕಲೆ ಈ ಕಾಲಘಟ್ಟಗಳ ಅಂತರವನ್ನು ಮೀರಿ ಒಂದೆಡೆಯಿಂದ ಸಾಗಿಬರುವ ಿತ್ರಕಲೆ ಸಾಹಿತ್ಯದ ಜೊತೆ ಜೊತೆಯಲ್ಲಿ ಸಹಜವಾಗಿ ಬೆಳೆದುಕೊಂಡು ಬಂದಿದೆ.

ನಮ್ಮ ಪ್ರಾಚೀನ ಹಸ್ತಪ್ರತಿಗಳು ಇದಕ್ಕೆ ನಿರ್ದೇಶನವಾಗಿ ನಮಗೆ ಇಂದು ಅಲ್ಲಲ್ಲಿ ಕಂಡು ರುತ್ತವೆ. ಹೀಗೆ ಹಸ್ತಪ್ರತಿಗಳಲ್ಲಿ "ಚಿತ್ರ ಮತ್ತು ಸಾಹಿತ್ಯ" ಒಂದೆಡೆಗೆ ಇರುವ ಹಸ್ತಪ್ರತಿಗಳನ್ನು ಾವು "ಹಸ್ತಪ್ರತಿ ಚಿತ್ರಕಲೆ" ಎಂದು ಕರೆಯುತ್ತೇವೆ. ಜನರ ಜೀವನದಲ್ಲಿ ಕಲೆ ಮತ್ತು ಾಹಿತ್ಯಗಳು ಎರಡಿಲ್ಲದಂತೆ ಒಂದರೊಳಗೆ ಮತ್ತೊಂದು ಬೆಳೆದು ಹೆಣೆದುಕೊಂಡಿರುವಂತೆ ಂದನ್ನು ಮತ್ತೊಂದು ಬೆಳೆದು ಅಭಿವ್ಯಕ್ತಿಗಾಗಿ ಆಶ್ರಯಿಸಿಕೊಂಡಿವೆ. ಧ್ವನಿ ಮತ್ತು ಲಿಪಿ ಾಧ್ಯಮಗಳ ಮುಖಾಂತರ ಕಲ್ಪಿತ ಪದಗಳ ಮಿತಿಯನ್ನು ಸಾಹಿತ್ಯವು ಆಯಾ ದೇಶಿಯಾ ೆಲೆಗಳಲ್ಲಿ ತನ್ನ ಆಶ್ರಯಗಳನ್ನು ಭಾವಗಳನ್ನು ಚಿತ್ರೀಕರಿಸುತ್ತಿದ್ದರು.[೩] ಚಿತ್ರಕಲೆಯ ದೇಶಿಯ ುತ್ತು ಅನ್ಯದೇಶಿಯ ಸೀಮಿತ ಶಬ್ದಕೋಶಗಳ ಗಡಿಯನ್ನು ಕಲಾ ಇತಿಹಾಸವನ್ನು ಕಾಲಮಾನವನ್ನು ಾಟಿಕೊಂಡು ತನ್ನ ಆಶ್ರಯಗಳನ್ನು ಸಮುದಾಯಕ್ಕೆ ಚಿತ್ರಸಬಲ್ಲರು.

ಹಸ್ತಪ್ರತಿಗಳ ಚಿತ್ರಕಲಾವಿದರು ಕರ್ನಾಟಕದ ಹಸ್ತಪ್ರತಿಗಳಲ್ಲಿ ಕೂಡಿ ಕೆಲಸಮಾಡಿ ಸಹಬಾಳ್ವೆಯ ದುಕನ್ನು ಸಾಧಿಸಿ ತೋರಿಸಿದ್ದಾರೆ. ಪ್ರಾಚೀನ ಕಾಲದಲ್ಲಿ ಈ ಹಸ್ತಪ್ರತಿಗಳಿಗೆ ಬಳಸುತ್ತಿದ್ದ ಸ್ತುಗಳನ್ನು ಗಮನಿಸಿ ಅದನ್ನು ಪೂಜ್ಯ ಪತ್ರೆ, ತಾಳೆಗರಿ, ಕೋರಿಕಾದ ಕಡತ, ಎಂದು ಕಟ್ಟು, ೂಪವನ್ನು ಗಮನಿಸಿ ಅದಕ್ಕೆ ಕಟ್ಟು, ಕವಳಿಗೆ, ಹೊತ್ತಿಗೆ, ಗ್ರಂಥ ಎಂದು ಕರೆಯುತ್ತಿದ್ದರು. ಂದು ಇಂಗ್ಲೀಷ್‌ನ Manususcript ಪರಿಕಲ್ಪನೆಯ ಪ್ರಭಾವದಿಂದಾಗಿ ಇವೆಲ್ಲವುಗಳನ್ನು ಹಸ್ತಪ್ರತಿ ಎಂಬ ಒಂದೇ ಹೆಸರಿನಿಂದ ಗುರುತಿಸಲಾಗುವುದು.[೪]

. ಉಮೇಶ, ಜೈನ ಚಿತ್ರಕಲೆ, ಪುಟ.೬

. ಡಾ. ಆನಂದ ಕೆ. ಪೂಜಾರ, ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ, ಪುಟ.೧೭೬

ಡಾ.ಎಂ.ಎಂ ಕಲಬುರ್ಗಿಯವರು ಅಭಿಪ್ರಾಯಪಡುವುದು ಸರಿಯೆನಿಸುತ್ತದೆ. ಡಾ.ಬಿ.ಕೆ. ಹಿರೇಮಠ ಅವರು "ಹಸ್ತಪ್ರತಿ" ಎಂಬುದಕ್ಕೆ "ಭಾರಮದೆ ಲಿಪಿ ವಸ್ತುವಿನ ಮೇಲೆ ಕೈಯಿಂದ ಬರೆದ ಜೀವನಾವಶ್ಯಕ ಜ್ಞಾನ ಪ್ರಧಾನ ಕೃತಿ ಮತ್ತು ಅದರ ಪ್ರತಿಕೃತಿಗಳು ಎಂದಿದ್ದಾರೆ. ಇವರ ವ್ಯಾಖ್ಯಾನವು ಶ್ರೀಯುತವಾದ ಎಫ್.ಎಂ.ಪಿತ್ರೆಯರಿಂದ ಹಿಡಿದು ಎಂ.ಎಂ.ಕಲಬುರ್ಗಿಯವರೂ ನಡೆದ ಹಸ್ತಪ್ರತಿಗಳ ದಶಾವತಾರದ ಚಿತ್ರಗಳನ್ನು ಕರಿತು ಹೇಳಿದ ಸ್ಥೂಲ ಸ್ವರೂಪದಿಂದ ವಿವರಣೆಯನ್ನು ಹೇಳಲಾಗುತ್ತದೆ.

ಬಿ.ಕೆ.ಹಿರೇಮಠ ಅವರ ತರುವಾಯ ಇದೇ ರೀತಿ, ಹಸ್ತಪ್ರತಿಗಳೊಂದಿಗೆ ಇರುವ ಚಿತ್ರಗಳನ್ನು ಗಮನಿಸಿರುವ ಡಾ.ಎಸ್.ಸಿ.ಪಾಟೀಲವರು ಹಸ್ತಪ್ರತಿ ಚಿತ್ರಕಲೆಯಂತೆ ಕೈಯಿಂದ ಬರವಣಿಗೆಗಾಗಿ ಸಿದ್ದಗೊಂಡ ವಸ್ತುಪಟ, ವೃಕ್ಷಪತ್ರ (ತಾಡೋಲೆ, ಭೂರ್ಜ ಪತ್ರ) ಕಾಗದ, ಚರ್ಮದಂತಹ ಹಗುರುವಾದ ವಸ್ತು ಮತ್ತು ಕಟ್ಟುಗಳ ರಕ್ಷಾಕವಚಗಳ ಮೇಲೆ ಮತ್ತು ಒಳಗಡೆ ಅಲಂಕಾರಕ್ಕಾಗಿ ಬರವಣಿಗೆಯ ವಿಷಯದ ಹಿನ್ನೆಲೆಯಲ್ಲಿ ಆಯಾ ಸಂದರ್ಭ ಸನ್ನಿವೇಶಕ್ಕೆ ತಕ್ಕಂತೆ ಚಿತ್ರಿಸಿದ ರೇಖಾವರ್ಣ ವಿನ್ಯಾಸದ ಚಿತ್ರಗಳ ದಶವತಾರದ ವರ್ಣಚಿತ್ರಕಲೆ ಎಂದು ವ್ಯಾಖ್ಯಾನವೊಂದನ್ನು ನೀಡಿದ್ದಾರೆ.

ಈ ಅಮೂಲ್ಯವಾದ ಗ್ರಂಥಗಳ ಹಸ್ತಪ್ರತಿಗಳೇ ಮೂಡಬಿದ್ರಿಯ ಸಿದ್ದಾಂತ ಬಸದಿಯಲ್ಲಿರುವುದು, ಈ ಗ್ರಂಥಗಳಲ್ಲಿ ವಿಷಯ ನಿರೂಪಣಾ ಚಿತ್ರರಚನೆಗೆ ಸಾಮಾನ್ಯವಾಗಿ ವಿಶಾಲವಾಗಿರುವ ತಾಳೆಗರಿಗಳನ್ನು ಆರಿಸಿ ಚಿತ್ರಗಳು ಕೊರೆಯಲಾಗಿದೆ. ಕೂರ್ಚಿಕೆಯೆಂಬ ವಿಶೇಷ ಲೇಖನಿ ರಚನೆ ಹಾಗೂ ವರ್ಣಸಂಯೋಜನೆ ಮಾಡಲಾಗಿದೆ. ಕೆಲವು ಕಡೆ ಧಾತು ವರ್ಣಗಳನ್ನೂ ಪ್ರಕೃತಿಗಾಗಿ ಬಳಸಲಾಗಿದೆ. ಆ ಕಾಲದ ಪ್ರಮುಖ ವಿಕಾರಗಳೆಂದು ನಿರ್ಷ್ಕಷ್ಟತವಾಗಿದ್ದ ಗೈರಿಕ (ಕೆಂಪು), ನೀಲಿ, ಶುದ್ಧ (ಬಿಳುಪು), ಕಜ್ಜಲ (ಕಪ್ಪು) ಹರಿತಾಳ (ಹಳದಿ) ಇವುಗಳನ್ನು ಪ್ರಮಾಣಬದ್ಧವಾಗಿ ಮಿಶ್ರಣಮಾಡಿ ಭಾವಾಭಿಜ್ಯತೆಗೆ ತಕ್ಕಂತೆ ತ್ಯಾಗದ ಸಂಕೇತಕ್ಕೆ ಕೆಂಪು ಕಾವಿಯನ್ನು, ಸರ್ವವ್ಯಾಪಕತೆಯ ಸಂಕೇತಕ್ಕೆ ನೀಲಿಯನ್ನು ಸಂಪತ್ತಿನ ಸೂಚನೆಗೆ ಹಸಿರು ಬಣ್ಣವನ್ನು ರೂಪ ಭೇದ ಭಾವ, ಲಾವಣ್ಯಗಳಿಗೆ ಅನುಗುಣವಾಗಿರುವಂತೆ ನಿಯಮಾನುಸಾರವಾಗಿ ಲೇಪಿಸಿ ಚಿತ್ರಕಲಾ ತಂತ್ರ ಭಾವಾಭಿಜ್ಞತೆಯನ್ನು ಹೊಯ್ಸಳ ಚಿತ್ರಕಾರನು ತನ್ನ ಸೀಮಿತ ಮಿತಿಯಾದ ತಾಳೆಗರಿಯ ಚಿಕ್ಕ ಅಂಕಣಗಳಲ್ಲಿ ನಿರೂಪಿಸಿರುವಂತೆ ಚಿತ್ರಗಳಲ್ಲಿ ಈಗಲೂ ಕಂಡು ಬರುವ ಅಚ್ಚಳಿಯದ ವರ್ಣಗಳ ಪ್ರಕೃತಿಯ ಆಗಿನ ಹೊಯ್ಸಳ ಚಿತ್ರ ಕಲಾವಿದರ ವರ್ಣ ಮಿಶ್ರಣ ಕೌಶಲ್ಯ ಮತ್ತು ನಿಪುಣತೆಯನ್ನು ಪ್ರತಿಬಿಂಬಿಸುತ್ತವೆ. ಈ ಚಿತ್ರಪಟಗಳನ್ನು ತಾಳೆಗರಿ ಗ್ರಂಥಗಳಲ್ಲಿ ಅಳವಡಿಸಿರುವ ಕಾಲ ಹೊಯ್ಸಳೇಶ್ವರ ವಿಷ್ಣುವರ್ಧನನ ಕಾಲವೆಂದೇ ಧೃಡವಾಗಿ

ಹೇಳಬಹುದು. ಚಿತ್ರಗಳ ಅಂಚುಗಳಲ್ಲಿ ಚಿತ್ರಗಳ ನಿರೂಪಣೆಯನ್ನು ಮುದ್ದಾದ ಅಕ್ಷರಗಳಿಂದ ಒಡಮೂಡಿಸಿರುವುದು ಕಾಣಬಹುದಾಗಿದೆ.

ಇದನ್ನೇ ಮತ್ತಷ್ಟು ವಿಸ್ತಾರವಾಗಿ ವಿಭಿನ್ನವಾಗಿ ಒಂದೆಡೆ ಸೇರಿ ಒಂದಕ್ಕೆ ಮತ್ತೊಂದು ಎರಡು ಹನಿಗಳು ಸಂಗಮಿಸಿ ಜನೋಪಕಾರಿ ಮತ್ತು ಜಗೋಪಕಾರಿಯಾದ ನೀರಿನಂತಹ ಅಮೂಲ್ಯವಾಗಿ ಒಂದೆಡೆ ಸೇರಿ ಪೂರಕವಾಗುವುದನ್ನೇ ನಾವು ಹಸ್ತಪ್ರತಿ ಚಿತ್ರಕಲೆ ಎನ್ನಬಹುದು. ಒಂದೊಂದು ಪ್ರದೇಶದಲ್ಲಿ ಒಂದೊಂದೆ ಭಾಷೆಯಂತೆ ಸಾಹಿತ್ಯ ರಚನೆಯಾಗುತ್ತದೆ. ಅಲ್ಲದೇ ಅದು ಬೇರೆ ಬೇರೆ ವಿಧಾನ ಆಕಾರ, ರೂಪಗಳು ಚಿತ್ರಕಲೆಯಲ್ಲಿ ಅಭಿವ್ಯಕ್ತವಾಗುತ್ತವೆ. ಇವೆಲ್ಲದರಿಂದ ಮತ್ತು ಆ ಜನ ಸಮುದಾಯದ–ವಿಶಿಷ್ಟವಾದ ಸಂಸ್ಕೃತಿ ಕಾಲದುದ್ದಕ್ಕೂ ಒಂದು ಆಧಾರವಾಗಿ ಕಂಡು ಬರುತ್ತದೆ. ಅದು ಜನಪದರ ಹಿರಿಮೆ ಜನಪದ ಭದ್ರ ಬುನಾದಿಯ ಮೇಲೆ ನಿಂತಾಗಲೇ ಒಂದು ಕಲೆ ಸಾಹಿತ್ಯ ಶ್ರೇಷ್ಠವಾಗುತ್ತದೆ. ದೀರ್ಘಕಾಲದವರೆಗೆ ಇದು ಸತ್ಯ ಎಂಬ ಮತ್ತು ಗಮನಾರ್ಹವಾದುದಾಗಿದೆ. ಹಸ್ತಪ್ರತಿ ಚಿತ್ರಕಲೆಯ ಈ ಮಾತಿಗೆ ಹೊರತಾಗಿಲ್ಲ ಎಂದು ಹೇಳಲಾಗಿದೆ.

**"ಹಸ್ತಪ್ರತಿಗಳ ದಶಾವತಾರದ ಚಿತ್ರಗಳು"**

ದಶಾವತಾರ ಹಿನ್ನೆಲೆಯಲ್ಲಿ ನಾವು ಹಸ್ತಪ್ರತಿ ಚಿತ್ರಗಳನ್ನು ಗಮನಿಸುವಾಗ ನಾವು ಆಯಾ ಮತ ಧರ್ಮಗಳು ತಾತ್ವಿಕವಾದ ಚೌಕಟ್ಟಿನೊಳಗೆ ಪರಿಭಾವಿಸಲಾಗಬೇಕಾಗುತ್ತದೆ. ಯಾಕೆಂದರೆ ಪ್ರತಿಯೊಂದು ಧರ್ಮವು ತನ್ನದೇ ಆದ ವಿಧಿ–ವಿಧಾನ ವಿವಿಧ ಕ್ರಮಗಳನ್ನು ಸಾಂಪ್ರದಾಯ ಸಂಸ್ಕೃತಿಯನ್ನು ಗರ್ಭೀಕರಿಸಿ ಕೊಂಡಿರುತ್ತದೆ. ಹಾಗಾಗಿ ನಾವು ಅದರ ಪರಿಧಿಯೊಳಗಿನೇ ಅಭಿಸಿಸಬೇಕಾಗುತ್ತದೆ. ಧರ್ಮದ ವಿಚಾರಕ್ಕೆ ಬಂದಾಗ ನಮಗೆ ಬಹು ಹಿಂದಿನಿಂದಲೂ ಹಲವು ಧರ್ಮಗಳು ಇರುವುದು ನಮಗೆ ಕಲಾ ಇತಿಹಾಸದ ಪುಟಗಳಿಂದ ತಿಳಿದು ಬರುತ್ತದೆ.

ಈ ಮೇಲಿನ ಎಲ್ಲಾ ವಿಚಾರವನ್ನು ಗಮನಿಸಿದಾಗ ಯಾವುದೇ ಧರ್ಮ ತನ್ನ ತನವನ್ನು ಬಿಟ್ಟು ಕೊಡುವುದಿಲ್ಲ. ಇದಕ್ಕೆ ಉದಾಹರಣೆಯಾಗಿ ಭೌದ್ಧ ಧರ್ಮ, ಜೈನಧರ್ಮ, ವೀರಶೈವ ಧರ್ಮ, ಇವುಗಳ ವಿಚಾರಗಳನ್ನು ವಿವರವಾಗಿ ಅಭ್ಯಾಸ ಮಾಡಿದರೆ ಗೊತ್ತಾಗುತ್ತದೆ. ಅದೇ ರೀತಿ ಚಿತ್ರಕಲೆಗೆ ಸಂಬಂಧಿಸಿದ ಕೆಲವು ಅಭಿಪ್ರಾಯ ಮಂಡಿಸುವುದಾದರೆ ನಾವು ಬಹು ಸಂಸ್ಕೃತಿಯನ್ನು ಒಪ್ಪಿಕೊಂಡು ಬಹುಭಾಷೆ ಬಹುಧರ್ಮ, ಬಹುಜಾತಿಗಳ ಮರದ ನೆರಳಿನಲ್ಲಿ ಬದುಕುತ್ತಿರುವುದರಿಂದ ಪ್ರತಿಯೊಂದು ಧರ್ಮದ ವಿಚಾರಗಳು ನಮಗೆ ಅರ್ಥವಾಗದೇ ಹೋಗಬಹುದು. ಮತ್ತು ಅವನು ಅವನಷ್ಟಕ್ಕೆ ರಸ್ಥವಾಗಿದ್ದರಿಂದ ಸಾಹಿತ್ಯದಿಂದ ಸಾಹಿತ್ಯದಲ್ಲಿರುವ

ವಿಚಾರಗಳು ಈ ಸಾಮಾನ್ಯ ಜನವರ್ಗಕ್ಕೆ ತಮ್ಮದೇ ಆದ ಆಕಾರವನ್ನು ರಚಿಸುವ ಕಲಾವಿದ ಅನಂತರ ಕಾಲದಲ್ಲಿ ಪ್ರತಿ ಮಾಡುವ ಲಿಪಿಕಾರನಿಗೆ ನೆನಪಿಗೆ ಬಂದಿದ್ದು ಸಾಮಾನ್ಯ ಜನರೇ ಹೊರತು ಪಂಡಿತರಲ್ಲ. ಆ ಕಾರಣವಾಗಿ ಲಿಪಿಕಾರ ಕಲ್ಪನೆ ಕಡೆಗೆ ಸಂಬಂಧಿಸಿದಂತೆ ಕೆಲವು ಚಿತ್ರಗಳನ್ನು ಬಿಡಿಸಿ, ಆ ಚಿತ್ರದ ವಿಷಯವನ್ನು ಅವರ ಮೂಲಕ ಕಟ್ಟಿಕೊಡುವ ಪ್ರಯತ್ನ ಮಾಡುತ್ತಾನೆ. ಸಹಜವಾಗಿ ಇದು ಓದುವವರಿಗೂ ಕಾಮಧೇನುವಾಗಿ ಪರಿಣಮಿಸಲಿಕ್ಕೆ ಸಾಧ್ಯವಾಯಿತೆನ್ನಬಹುದು.

ಹಸ್ತಪ್ರತಿಕಾರರು ಭಕ್ತಿ, ಧರ್ಮ ಪ್ರಚಾರ, ಜನಾಕರ್ಷಣೆ ಮತ್ತು ವೈಯಕ್ತಿಕ ಅಭಿರುಚಿಯ ಕಾರಣವಾಗಿ ಒಂದು ಕೃತಿಯನ್ನು ಪ್ರತಿ, ಮಾಡಿತ್ತಿದ್ದಷ್ಟು ಅಲ್ಲದೇ ಅದನ್ನು ಕಲಾತತ್ವವಾಗಿ ವಿನ್ಯಾಸಗೊಳಿಸಲು ಯತ್ನಿಸಿದರು, ಪರಿಣಾಮವಾಗಿ ಹಸ್ತಪ್ರತಿಗಳಲ್ಲಿಯೂ ಚಿತ್ರಕಲೆ ಕಾಣಿಸಿಕೊಂಡಿತ್ತು. ಹಸ್ತಪ್ರತಿ, ಭಂಡಾರಗಳಲ್ಲಿ, ವೈಷ್ಣವ ಹಸ್ತಪ್ರತಿ ಭಂಡಾರಗಳಲ್ಲಿ ಅವುಗಳ ವೈವಿಧ್ಯಮಯವಾಗಿ ವಿಶೇಷವಾಗಿ ಕಂಡು ಬರುವುದು ಮೈಸೂರು ಮುಮ್ಮಡಿ ಕೃಷ್ಣರಾಜ ಒಡೆಯರು ಸ್ವರಚಿತವಾಗಿ ಬರೆದ ಹಸ್ತಪ್ರತಿಗಳಾದ ೧. ಶ್ರೀತತ್ವನಿಧಿ, ೨. ಸ್ವರ ಚೂಡಾಮಣಿ, ೩. ಸಾಗಂಭಿಕ ಪರಿಮಾಣ, ೪. ಚಾಮುಂಡೇಶ್ವರಿ ಮಹಿಮೆ ಇತ್ಯಾದಿ ಗ್ರಂಥಗಳನ್ನು ಗಮನಿಸಬಹುದು. ವಿಶ್ವವಿದ್ಯಾಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದಲ್ಲಿ ಎಂಬುದನ್ನು ಗಮನಿಸಬಹುದು.

"ಕರ್ನಾಟಕದ ಹಸ್ತಪ್ರತಿ ದಶಾವತಾರ ಚಿತ್ರಗಳ ವರ್ಗೀಕರಣ"

೧. ಫಲಕದ ಮೇಲಿನ ಚಿತ್ರಗಳು

೨. ತಾಳೆಗರಿಯ ಮೇಲೆ ಕುಂಚದ ಚಿತ್ರಗಳು.

**ಕಾಗದದ ಮೇಲಿನ ಚಿತ್ರಗಳು**

೧. ಹಸ್ತಪ್ರತಿಗಳಿಗೆ ರಕ್ಷಾ ಕವಚದಂತಿರುವ ಫಲಕಗಳು ತಾಳೆಗರಿ ಕಾಗದ ಹಸ್ತಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವಲ್ಲಿ ಈ ಫಲಕಗಳು ರಕ್ಷಣೆ ನೀಡುತ್ತದೆ. ಹಾಗಾಗಿ, ಬೂಷ್ಟ ತೇವಾಂಶಗಳಿಂದ ರಕ್ಷಣೆ ಒದಗಿಸಿಂದಂತೆ ಗೆದ್ದಿಲು, ಜಿರಲೆ, ಜೆಳ್ಳಿಮೀನುಗಳಿಂತಹ ಕ್ರಿಮಿ ಕೀಟಗಳಿಂದ, ಇಲಿಗಳಿಂದಲೂ ಈ ಫಲಕಗಳು ಸಂರಕ್ಷಣೆಯನ್ನು ಒದಗಿಸಿರುವುದು ಮೂಲ ಹಸ್ತಪ್ರತಿಗಳ ವೃದ್ಧಿಸುತ್ತದೆ. ಮರ, ಲೋಹ, ಅಲ್ಲದೆ ಮಿಶ್ರ ಮಾಧ್ಯಮಗಳಂತಹ ಫಲಕಗಳ ಮೇಲೆಯೂ ಆಯಾ ಹಸ್ತಪ್ರತಿಗಳ ಕಥಾ ವಸ್ತುವಿಗೆ ಸಂಬಂಧಿಸಿದಂತೆ ಮುಖಪುಟ ಚಿತ್ರಗಳು ಚಿತ್ರಿಸಿರುವುದುಂಟು, ಕರ್ನಾಟಕದ ಜೈನ ಹಸ್ತಪ್ರತಿಗಳ ಸಂರಕ್ಷಣೆಗೆಂದು ಮಾಡಲಾದ ರಕ್ಷಾ ಕವಚದ (ಕಟ್ಟಿಗೆಯ) ಮೇಲೆ ಚಿತ್ರಸಿದ ಒಂದರೆಡು ಚಿತ್ರಗಳು ಕಂಡುಬಂದಿವೆ. ಈ ಮರ ಮಾಧ್ಯಮದ ಫಲಕದ ಮೇಲೆ ಚಿತ್ರಿಸಲಾದ ಎರಡು ಚಿತ್ರಗಳನ್ನೇ ಅಧ್ಯಯನಕ್ಕೆ ಒಳಪಡಿಸಿ, ಅವುಗಳ ವಸ್ತುವಿಷಯ ಕುರಿತು ಚರ್ಚಿಸಲಾಗಿದೆ.

**ತಾಳೆಗರಿಯ ಮೇಲೆ ಕುಂಚದ ಚಿತ್ರಗಳು.**

"ಕರ್ನಾಟಕದಲ್ಲಿ ದೊರೆಯುವ ವೈಷ್ಣವರ ತಾಳೆಯೋಲೆ ಗ್ರಂಥಗಳ ಲಕ್ಷಾಫಲಗಳ ಮೇಲೆ ಚಿತ್ರ ರಚನೆಗಳನ್ನು ಕಾಣಬಹುದಾದರೂ ತಾಳೆ ಎಲೆಗಳ ಮೇಲೆ ರಚಿಸಿದ ರೇಖಾಚಿತ್ರಗಳು ತೀರ ಅಪರೂಪ ಸಾಧ್ಯ. ಕರ್ನಾಟಕದಲ್ಲಿ ದೊರೆತ ಶ್ರವಣಬೆಳಗೋಳದಲ್ಲಿ ಹಸ್ತಪ್ರತಿಗಳು ಮೈಸೂರಿನ ಓರಿಯಂಟಲ್ ಗ್ರಂಥಾಲಯದಲ್ಲಿ ಸಂಗ್ರಹಿಸಿ ಸುರಕ್ಷಿತವಾಗುಳಿದ ತಾಳೆಗರಿಗಳ ಮೇಲಿನ ರೇಖಾ ಚಿತ್ರಗಳಿರುವ ೧೫-೧೬ನೆಯ ಶತಮಾನದಲ್ಲಿ ರಚನೆಗೊಂಡಿರ ಬಹುದಾದ "ತ್ರಿಲೋಕಸಾರ" ಗ್ರಂಥದ ಒಂದು ಪ್ರತಿ ಇದೆ. ಸುಮಾರು ೨೪ ಉದ್ದವಾಗಿರಬಹುದಾದ ತಾಳೆಗರಿಗಳ ಮೇಲ ಗ್ರಂಥದ ಬರಹ ಹಾಗೂ ಚಿತ್ರದ ರಚನೆಗೊಂಡಿರುವುದು ಕಾಣಬಹುದು.

**ಹಸ್ತಪ್ರತಿಯಲ್ಲಿ ದಶಾವತಾರದ ಚಿತ್ರಗಳು:**

**೧. ಕಾಗದ ಮಾಧ್ಯಮ ದಶಾವತಾರದ ಚಿತ್ರಗಳು:**

**ಹಸ್ತಪ್ರತಿಯಲ್ಲಿ ವಿಷ್ಣುವಿನ ಮತ್ಸ್ಯಾವತಾರ ಚಿತ್ರ-೧**

ವಿಷ್ಣುವಿನ ದಶಾವತಾರದಲ್ಲಿ ಮೊದಲನೆಯದು ಮತ್ಸ್ಯಾವತಾರವಾಗಿದ್ದು, ಇಲ್ಲಿ ವಿಷ್ಣುವು ಮತ್ಸ್ಯರೂಪಧರಿಸಿದ್ದು, ಕಂಡುಬರುತ್ತದೆ. ಈ ಚಿತ್ರ ಅಡ್ಡವಾದ ಆಕೃತಿಯಲ್ಲಿ ಕಾಗದದಲ್ಲಿ ಕಂಡುಬರುತ್ತದೆ. ಮತ್ಸ್ಯಾವತಾರದಲ್ಲಿ ವಿಷ್ಣುವಿನ ಮೈಬಣ್ಣ ನೀಲಿಯನ್ನು ಬಳಸಲಾಗಿದೆ. ಕೀರಿಟಧಾರಿಯಾದ ಹಾವು ವಿಷ್ಣು ಎರಡು ಕೈಗಳನ್ನು ಹೊಂದಿದ್ದಾನೆ. ವಿಷ್ಣುವಿನ ಕೆಳಗಿನ ಕೈಗಳಲ್ಲಿ ಯಾವುದು ಆಯುಧ ಕಂಡುಬರುವುದಿಲ್ಲ. ಕತ್ತಿನ ಭಾಗದಲ್ಲಿ ಕೆಂಪುವರ್ಣ ವಸ್ತ್ರವು ಮತ್ತು ಕೆಳಗಿನ ಭಾಗದಲ್ಲಿ ಪೂಜಾ ಸಾಮಗ್ರಿಗಳು ಕಂಡುಬರುತ್ತವೆ. ಅದೇ ರೀತಿ ಶಿವನ ಕಂಡುಬರುತ್ತದೆ. ವಿಷ್ಣುವಿನ ಕೆಳಗಿನ ಭಾಗದಲ್ಲಿ ಮತ್ಸ್ಯಾವತಾರದ ಚಿತ್ರ ಕಂಡುಬರುತ್ತದೆ. ವಿಷ್ಣುವಿನ ಮೇಲಿನ ಭಾಗದಲ್ಲಿ ಕೂರ್ಮಾವತಾರದ ಚಿತ್ರವು ಕಂಡುಬರುತ್ತದೆ. ಈ ಚಿತ್ರವು ಕಿರೀಟದ ಮೇಲ್ಭಾಗದಲ್ಲಿ ತುದಿಯಲ್ಲಿ ಪ್ರತ್ಯೇಕವಾದ ಚಿಕ್ಕ ಚಿಕ್ಕ ವಿಷ್ಣುವಿನ ಚಿತ್ರಗಳು ಕಂಡುಬರುತ್ತವೆ. ನೆರಳು ಬೆಳಕಿನ ವಿನ್ಯಾಸವು ಅಷ್ಟೊಂದು ಕಂಡುಬರುವುದಿಲ್ಲವಾದರೂ ವರ್ಣಗಳಲ್ಲಿ ಅದರ ತೆಳುವರ್ಣಗಳಿಂದ ಚಿತ್ರ ಸಮತೋಲವನ್ನು ಹೊಂದಿದೆ.

**ವಿಷ್ಣುವಿನ ಕೂರ್ಮಾವತಾರ ಚಿತ್ರ-೨**

ಎರಡನೆಯ ಅವತಾರದಲ್ಲಿ ಇಲ್ಲಿ ವಿಷ್ಣುವು ಕೂರ್ಮಾ ರೂಪಧರಿಸಿದ್ದು ಕಂಡುಬರುತ್ತದೆ. ವಿಷ್ಣುವಿನ ಮೈ ಬಣ್ಣವನ್ನು ತಿಳಿ ನೀಲಿಯ ವರ್ಣವನ್ನು ಇಲ್ಲಿ ಬಳಸಲಾಗಿದೆ. ಕಿರೀಟಧಾರಿಯಾದ ಚಿಕ್ಕ ಸಿಂಹಾಸನದ ಮೇಲೆ ಕುಳಿತಿರುವುದನ್ನು ಕಂಡುಬರುತ್ತದೆ. ವಿಷ್ಣುವಿನ ಕೈಗಳು ಐದು

ಎಂದು ಗುರುತಿಸಲಾಗಿದೆ. ವಿಷ್ಣು ಶಂಖ ತ್ರಿಶೂಲವನ್ನು ಇವರ ಕೈಯಲ್ಲಿ ನೋಡಬಹುದು. ಅದೇ ರೀತಿಯ ವಿಷ್ಣುವಿನ ಬಲಗೈ ಮತ್ತು ಎಡಗೈ ಇಬ್ಬರೂ ಮಹಿಳೆಯರು ಕಂಡುಬರುತ್ತದೆ. ಇಲ್ಲಿ ಕೆಂಪು ವರ್ಣವು ಹೆಚ್ಚು ಕಂಡುಬರುತ್ತದೆ. ಹಸಿರು, ಹಳದಿ, ತಿಳಿಗುಲಾಬಿ ಚಿಕ್ಕ ಚಿಕ್ಕ ದೊಡ್ಡದಾದ ಚಿತ್ರವನ್ನು ಇಲ್ಲಿ ಗುರುತಿಸಬಹುದು. ನೈಸರ್ಗಿಕ ಬಣ್ಣಗಳನ್ನು ಬಳಸಿರುವುದು ಕಂಡುಬರುತ್ತದೆ. ವಿಷ್ಣುವಿನ ಪಕ್ಕದಲ್ಲಿ ಎರಡು ಗಿಳಿಗಳನ್ನು ನೋಡಬಹುದು.

**ವಿಷ್ಣುವಿನ ವರಹವತಾರ ಚಿತ್ರ-೩**

ಮೂರನೇ ಅವತಾರದಲ್ಲಿ ವರಹವತಾರವಾಗಿ ನೋಡಬಹುದು. ವಿಷ್ಣುವಿನ ತನ್ನ ಮೂರನೇ ಅವತಾರದಲ್ಲಿ ಮೈ ಬಣ್ಣವು ತಿಳಿಗುಲಾಬಿ ವರ್ಣದಿಂದ ಕೂಡಿದ್ದು, ಆದರೆ ಕಿರೀಟದಾರಿಯಾಗಿರುವುದು ಗಮನಿಸಬಹುದು. ಇಲ್ಲಿ ವಿಷ್ಣುವಿನ ನಾಲ್ಕು ಕೈಗಳು ಕಂಡುಬರುತ್ತದೆ. ಇಲ್ಲಿ ವಿಶೇಷವಾಗಿ ಕಿರೀಟವು ಮುಖ್ಯವಾಗಿ ಕೆಂಪುವರ್ಣದಿಂದ ರಚನೆಯಾಗಿರುವುದು ಕಂಡುಬರುತ್ತದೆ. ವಿಷ್ಣು ಮತ್ತು ಪತ್ನಿ ಲಕ್ಷ್ಮೀಯನ್ನು ಎಡಭಾಗದಲ್ಲಿರುವ ಸಂಯೋಜನೆಯತ್ತ ತೋರಿಸಿದ್ದು, ನಂತರ ಸರಸ್ವತಿ ಪಾರ್ವತಿ ಒಂದೇ ತೆರನಾಗಿ ಚಿತ್ರಿಸಲ್ಪಟ್ಟಿದ್ದಾರೆ.

**ವಿಷ್ಣುವಿನ ನರಸಿಂಹಾವತಾರ ಚಿತ್ರ-೪**

ನಾಲ್ಕನೇ ಚಿತ್ರದಲ್ಲಿ ವಿಷ್ಣುವಿನ ನರಸಿಂಹನವತಾರವಾಗಿ ನೋಡಬಹುದು. ಮೈಬಣ್ಣವು ನೀಲಿ ವರ್ಣದಿಂದ ಚಿತ್ರರಚನೆ ಮಾಡಿಕೊಂಡಿರುವುದು ಕಾಣಬಹುದು. ಅದೇ ಪ್ರಕಾರ ಈ ಕೈಗಳಲ್ಲಿ ಶಂಕ, ಮುಂದಿನ ಕೈಗಳಲ್ಲಿ ಒಂದು ಅಭಯಾಸ್ತ್ರ ಕಣ್ಣುಗಳು ವಿಶಾಲವಾಗಿದೆ. ಇಲ್ಲಿ ವೃತ್ತಾಕಾರದ ಕಣ್ಣುಗಳು ಸಂದರ್ಭಕ್ಕೆ ತಕ್ಕಂತೆ ಚಿತ್ರ ರಚನೆಯನ್ನು ಮಾಡಲಾಗಿದೆ. ಎರಡು ಕಾಲಗಳನ್ನು ಡೊಂಕಿಸಿ ಕುಳಿತಿರುವ ಚಿತ್ರವಾಗಿದೆ. ಇಲ್ಲಿ ದ್ವಿತೀಯ ತರಗತಿಯ ವರ್ಣಗಳನ್ನು ಬಳಸಿಕೊಂಡು ಚಿತ್ರರಚನೆ ಮಾಡಿದ್ದಾರೆ. ಮಂಟಪದಲ್ಲಿ ವಿವಿಧ ವಿನ್ಯಾಸಗೊಳಿಸಲಾಗಿದೆ.

**ವಿಷ್ಣುವಿನ ವಾಮನವತಾರ ಚಿತ್ರ-೫**

ಈ ವಿಷ್ಣು ವಾಮನ ಅವತಾರದಲ್ಲಿ ಬಲಿ ಚಕ್ರವರ್ತಿಯ ಹತ್ತಿರ ಬ್ರಾಹ್ಮಣ ವೇಷದಲ್ಲಿ ಬಂದನು. ಚಕ್ರವರ್ತಿಗೆ ದಾನವನ್ನು ಕೇಳುತ್ತಾನೆ. ಕೇವಲ ಮೂರು ಪಾದ ಜಾಗವನ್ನು ಭಿಕ್ಷೆ ನೀಡು ಎಂದು ಕೇಳಿ ಒಂದು ಪಾದವನ್ನು ಭೂಮಿಗೆ ಇನ್ನೊಂದು ಪಾದವನ್ನು ಆಕಾಶಕ್ಕೆ ಇಡುತ್ತಾನೆ. ಈ ಚಿತ್ರದಲ್ಲಿ ಮುಖವು ಮುಗ್ಧ ಬಾಲಕನಂತಿದ್ದು, ಒಂದು ಕೈಯಲ್ಲಿ ಕಮಂಡಲವನ್ನು ಹಿಂದಿದ್ದಾನೆ. ಹೀಗೆ ಇನ್ನೂ ಹಲವು ಬಣ್ಣಗಳನ್ನು ಬಳಸಿಕೊಂಡು ಹಿಡಿದಿದ್ದಾನೆ. ಹೀಗೆ ಇನ್ನೂ ಹಲವು ಬಣ್ಣಗಳನ್ನು ಬಳಸಿಕೊಂಡು ಚಿತ್ರ ರಚನೆ ಮಾಡಿರುವುದು ಕಂಡುಬರುತ್ತದೆ. ಚಿಕ್ಕ ಲಿಪಿಯನ್ನು ಇಲ್ಲಿ ಗುರುತಿಸಬಹುದು.

### ವಿಷ್ಣುವಿನ ಪರಶುರಾಮನವತಾರ ಚಿತ್ರ–೬

ಆರನೆಯ ಅವತಾರದಲ್ಲಿ ವಿಷ್ಣು ಪರಶುರಾಮನಾಗಿ ತಾಳುತ್ತಾನೆ. ಈ ಪರಶುರಾಮನ ಅವತಾರದಲ್ಲಿ ಮುಂದೆ ಕಾರ್ತಿಕ ವೀರಾರ್ಜುನನ್ನು ಸಂಹರಿಸಿದ. ಅವನ ಮೈಬಣ್ಣವು ತಿಳಿಗುಲಾಬಿ ವರ್ಣದಿಂದ ರಚಿಸಿದೆ. ಬಲಕೈಯಲ್ಲಿ ಕೊಡಲೇ ಹಿಡಿದುಕೊಂಡು ಎಡಗೈಯಲ್ಲಿ ಸೊಂಟದ ಮೇಲೆ ಇರಿಸಿಕೊಂಡು ನಿಂತಿದ್ದಾನೆ.

### ವಿಷ್ಣುವಿನ ರಾಮನವತಾರ ಚಿತ್ರ–೭

ಈ ಅವತಾರದಲ್ಲಿ ವಿಷ್ಣು ಶ್ರೀರಾಮನಾಗಿ ರಾವಣವನ್ನು ಸಂಹರಿಸಲು ಶ್ರೀರಾಮನು ಬಾಣ ಬಿಡುತ್ತಿದ್ದು, ತಿಳಿಕೆಂಪು ಬಣ್ಣದಿಂದ ಚಿತ್ರ ರಚನೆಯಾಗಿದೆ. ಕೈ ಮೇಲಕ್ಕೆ ಎತ್ತಿದ್ದಾನೆ. ಈ ಚಿತ್ರದಲ್ಲಿ ಆಭರಣಗಳನ್ನು ಧರಿಸಿದ್ದು ಹಳದಿ ವರ್ಣದಿಂದ ಚಿತ್ರರಚನೆ ಮಾಡಿದೆ. ಆಕಾಶದಲ್ಲಿ ಚಿಕ್ಕ ಚಿಕ್ಕ ಲಿಪಿಯನ್ನು ಈ ಚಿತ್ರದಲ್ಲಿ ವಿಶೇಷವಾಗಿ ನೋಡಬಹುದಾಗಿದೆ. ಮೇಲೆ ಹಾಗೂ ಕೈಕೆಳಗಿನ ಭಾಗದಲ್ಲಿ ಹಸ್ತಪ್ರತಿ ಲಿಪಿಯನ್ನು ಬರೆದಿದ್ದಾರೆ. ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಚಿತ್ರವಾಗಿದೆ ಎಂದು ಗುರುತಿಸಬಹುದು.

### ವಿಷ್ಣುವಿನ ಕೃಷ್ಣಾವತಾರ ಚಿತ್ರ–೮

ಇಲ್ಲಿ ಕೃಷ್ಣವತಾರದಲ್ಲಿ ವಿಷ್ಣು ಕೃಷ್ಣವತಾರ ಮಾಡಿದಾಗ ಒಮ್ಮೆ ದುರ್ವಾಸನು ಕೋಪಗೊಳ್ಳಲು ಮಡದಿಯಾದ ರುಕ್ಮಿಣಿಯೊಡನೆ ಬೆತ್ತಲೆಯಾಗಿ ನಿಂತಿರುವ ದೃಶ್ಯವನ್ನು ನೋಡಬಹುದು. ಕೃಷ್ಣ ತಿಳಿನೀಲಿಯ ಬಣ್ಣವನ್ನು ಇಲ್ಲಿ ಬಳಸಲಾಗಿದೆ. ಕೃಷ್ಣ ಮೇಲಿನ ಭಾಗದಲ್ಲಿ ಚಿಕ್ಕ ಚಿಕ್ಕ ಹಸ್ತಪ್ರತಿಯ ಲಿಪಿಗಳನ್ನು ಇಲ್ಲಿ ಕಾಣಬಹುದು. ಅದೇ ರೀತಿಯಾಗಿ ಕೃಷ್ಣವತಾರದಲ್ಲಿ ಅಧರ್ಮಿಗಳಾದ ಕೌರವರನ್ನು ಪಾಂಡವರಿಂದ ನಾಶಪಡಿಸಿ ಧರ್ಮಕರ್ತರಾದ ಕಥೆಯ ಮೂಲಕ ಪಾಂಡವರಿಗೆ ರಾಜ್ಯವನ್ನು ದೊರಕಿಸಿಕೊಟ್ಟಿದ್ದು ಇಲ್ಲಿ ಕಥೆಯ ಮೂಲಕ ನೋಡಬಹುದಾಗಿದೆ.

### ವಿಷ್ಣುವಿನ ಬೌದ್ಧವತಾರ ಚಿತ್ರ–೯

ಈ ಚಿತ್ರದಲ್ಲಿ ವಿಷ್ಣು ಬೌದ್ಧವತಾರವನ್ನು ನೋಡಬಹುದು. ಜ್ಞಾನ ಮುದ್ರೆಯ ಕೈಯನ್ನು ಹೊಂದಿದ್ದು ಇನ್ನೊಂದು ಕಲಾ ಯೋಗಮುದ್ರೆಯಲ್ಲಿದೆ. ಎಡಭಾಗದಲ್ಲಿ ಹಾಗೂ ಬಲಭಾಗದಲ್ಲಿ ಹಸ್ತಪ್ರತಿ ಲಿಪಿಯನ್ನು ಬರೆದಿರುವುದು ಕಂಡುಬರುತ್ತದೆ. ಕಾಲುಗಳಿಗೆ ತೆಳುನೀಲಿ ಬಣ್ಣ ಉಪಯೋಗಿಸಿದ್ದು ಅಲ್ಲದೇ ಪಕ್ಕದಲ್ಲಿ ಚಿಕ್ಕ ಚಿಕ್ಕ ಲಿಪಿಗಳನ್ನು ಈ ಬೌದ್ಧ ವತಾರದಲ್ಲಿ ಕಾಣಬಹುದು. ಚಿತ್ರದಲ್ಲಿ ಬಣ್ಣದ ಹಾಸು–ಬೀಸುಗಳ ಸಾಂಗತ್ಯವಿದೆ. ಬಣ್ಣದ ಮೇಲಿನ ಹಿಡಿತದಿಂದಾಗಿ ಕಲಾಕೃತಿಗೆ ಹೆಚ್ಚಿನ ಮೌಲ್ಯಪ್ರಾಪ್ತವಾಗಿದೆ.

## ವಿಷ್ಣುವಿನ ಕಲ್ಕಿ ಅವತಾರ ಚಿತ್ರ-೧೦

ವಿಷ್ಣುವಿನ ಕೊನೆಯ ಅವತಾರದಲ್ಲಿ ಇಲ್ಲಿ ವಿಷ್ಣು ಸಿಂಹಾಸನ ಕುಳಿತಿರುವ ದೃಶ್ಯವು ಇಲ್ಲಿ ಗಮನಿಸಬಹುದು. ಅದೇ ಪ್ರಕಾರ ಎಡ ಮತ್ತು ಬಲಭಾಗದಲ್ಲಿ ಚಿಕ್ಕ ಚಿಕ್ಕ ಕಂಪು ವರ್ಣದಿಂದ ಹಸ್ತಪ್ರತಿಯ ಲಿಪಿಗಳನ್ನು ರಚಿಸಿದ್ದಾರೆ. ಕಲಾವಿದನ ಕಲ್ಪನೆಯ ಹಾಗೇ ಛತ್ರಿಯನ್ನು ರಚನೆ, ಹಳದಿ ಮತ್ತು ಕೆಂಪು ಬಣ್ಣ ಬಳೆಯಲಾಗಿದೆ. ಕಿರೀಟಾಭರಣಧಾರಿಯಾದ, ವಿಷ್ಣು ಮೈಬಣ್ಣ ತಿಳಿಗುಲಾಬಿ ಹಾಗೂ ಹಳದಿ, ಹಸಿರು, ಪಂಚೆಯನ್ನು ರಚಿಸಿದ್ದಾನೆ. ಸಂಯೋಜನೆ ಮತ್ತು ಯಥಾದರ್ಶನದ ಹಿನ್ನೆಲೆ ಈ ಚಿತ್ರಕ್ಕೆ ಇದೆ ಎಂದು ಹೇಳಬಹುದಾಗಿದೆ.

ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರ ಪ್ರೋತ್ಸಾಹದಿಂದ ರೂಪಗೊಂಡಿರುವ ಶ್ರೀ ತತ್ವನಿಧಿಯಲ್ಲಿ ಒಂಬತ್ತು ನಿಧಿಗಳಿವೆ. ಅವುಗಳ ಶಕ್ತಿನಿಧಿ, ವಿಷ್ಣುನಿಧಿ, ಶಿವನಿಧಿ, ಬ್ರಹ್ಮನಿಧಿ, ಗ್ರಹನಿಧಿ, ವೈಷ್ಣವನಿಧಿ, ಶೈವನಿಧಿ, ಆಗಮನಿಧಿ, ಕೌತುಕನಿಧಿ, ಶೈವನಿಧಿ, ಆಗಮನಿಧಿ, ಕೌತುಕನಿಧಿ ಇವುಗಳೆಲ್ಲವೂ ಮೈಸೂರು ಕಲಾವಿದರಿಂದ ಅನೇಕ ವರ್ಣಗಳಿಂದ ಚಿತ್ರಗಳ ಸಂಯೋಜನೆಗೊಂಡಿರುತ್ತವೆ. ಇವುಗಳೆಲ್ಲವೂ ಮೈಸೂರು ವಿಶ್ವವಿದ್ಯಾಲಯದ ಪ್ರಾಚ್ಯ ಸಂಶೋಧನಾಲಯದ ಹಸ್ತಪ್ರತಿ ಬಂಡಾರದಲ್ಲಿ ಸುರಕ್ಷಿತವಾಗಿವೆ.

ಈ ಹಸ್ತ ಲಿಖಿತ ಗ್ರಂಥಗಳಲ್ಲಿ ಕೊಟ್ಟಿರುವ ಕಾಲ ನಿರ್ದೇಶನಗಳಿಂದ ಈ ಚಿಕ್ಕವರ್ಣ ಚಿತ್ರಗಳ ಕಾಲವನ್ನು ಸ್ಥೂಲ ರೀತಿಯಲ್ಲಿ ಅನುಕ್ರಮವಾಗಿ ಹೇಳಬಹುದು. ಕೇವಲ ಇಷ್ಟರಿಂದ ವರ್ಣ ಚಿತ್ರಕಲೆಯು ಹೇಗೆ ಬೆಳೆದುಬಂದಿತೆಂಬುದನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಈ ಚಿಕ್ಕವರ್ಣ ಚಿತ್ರಗಳು ಪಾರಂಪರಿಕವಾಗಿದೆ. ಈ ಸಾಂಪ್ರದಾಯದ ಅತ್ಯುತ್ತಮ ಚಿತ್ರಗಳು ರಾಜಪ್ರಜ್ಞಾ ಪ್ರಜ್ಞಾಪಾರಮತಿ ಹಸ್ತಲಿಖಿತ ಗ್ರಂಥಗಳಲ್ಲಿ ಎರೋರಿಕ್ ಸಂಗ್ರಹದಲ್ಲಿದ್ದ ಗಣ್ಯವ್ಯೂಹ ಹಸ್ತಲಿಖಿತ ಗ್ರಂಥಗಳಲ್ಲಿ ಮತ್ತು ಕಲ್ಕತ್ತಾ ಏಶಿಯಾಟಿಕ್ ಸೊಸೈಟಿಯಲ್ಲಿರುವ ನೇಪಾಳಿ ಶಕ ೧೯೧ರಲ್ಲಿ ಸಿದ್ಧವಾದ ಪ್ರಜ್ಞಾ ಎರೋವಿಕ್ ಎಂಬ ಹಸ್ತಲಿಖಿತ ಗ್ರಂಥಗಳಲ್ಲಿ ಇಲ್ಲಿ ಕರ್ನಾಟಕದ ಹಸ್ತಪ್ರತಿಗಳಲ್ಲಿ ಪ್ರಮುಖವಾಗಿ ಬಿಳಿ, ಕಪ್ಪು, ಕೆಂಪು, ಹಳದಿ ಹಾಗೂ ಹಸಿರು ಬಣಗಳನ್ನು ಬಳಸಲಾಗಿದೆ. ಇವೆ ಪಂಚವರ್ಣಗಳು ಈ ಪಂಚವರ್ಣಗಳು ಮಿಶ್ರಣದಿಂದ ಬಹು ಬಣ್ಣಗಳನ್ನು ಸಿದ್ಧಪಡಿಸಿಕೊಳ್ಳುವಲ್ಲಿ ಕರ್ನಾಟಕದ ಹಸ್ತಪ್ರತಿಗಳ ಕಲಾವಿದರು ಸಿದ್ಧಹಸ್ತರು.

ಹರಿತರಿ ತಾಮ್ರ, ಕೃಷ್ಣವೇತ ಮತ್ತು ನೇತೆ ಎಂಬ ಪಂಚವರ್ಣಗಳಲ್ಲಿ ನೀಲಿ ಬಣ್ಣವನ್ನು ಪರಿಗಣಿಸಿಲ್ಲವಾದರೂ ಅಭಿನವ ದಶಕುಮಾರ ಚರಿತೆಯನ್ನು ಷಡ್ವರ್ಣಗಳನ್ನು ಕುರಿತು ಉಲ್ಲೇಖವಿದ್ದು ಸುಂದರ ಬಣ್ಣದ ಚಿತ್ರರಚನೆ ಶ್ರೇಣಿ ಪರಿಪೂರ್ಣವಾದುವು ಎಂದು ಭಾವಿಸಲಾಗಿದೆ.

## ಹಸ್ತಪ್ರತಿಯ ವಿಷ್ಣುವಿನ ದಶಾವತಾರ ಚಿತ್ರಗಳು













## ಹಸ್ತಪ್ರತಿಯ ದಶಾವತಾರದ ಚಿತ್ರಗಳು





ಚಿತ್ರ–೧



ಚಿತ್ರ–೨



ಚಿತ್ರ–೩



ಚಿತ್ರ–೪

# ಅಧ್ಯಾಯ ೫

# ಗಂಜೀಫಾ ಮಾಧ್ಯಮದ ದಶಾವತಾರದ ಚಿತ್ರಗಳು

ಗಂಜೀಫಾ ಚಿತ್ರಕಲೆ ಸಾಂಪ್ರದಾಯಿಕವಾಗಿ ಚಿತ್ರಕಲಾ ಪ್ರಪಂಚದಲ್ಲಿ ಒಂದು ವಿಶಿಷ್ಠ ಕಲೆಯಾಗಿದೆ. ಮುಮ್ಮಡಿ ಕೃಷ್ಣರಾಜ ಒಡೆಯರ್ (೧೭೯೪-೧೮೬೮) ಜನ್ಮ ಸ್ಥಳವಾದ ಶ್ರೀರಂಗಪಟ್ಟಣದ ಈಗಿನ ಗಂಜೀಫಾ ಗ್ಯಾಲರಿಯಲ್ಲಿ ಗಂಜೀಫಾ ಎಲೆಗಳನ್ನು ಪ್ರದರ್ಶಿಸಲಾಗಿದೆ. ಮುಮ್ಮಡಿಯವರ ದ್ವಿಶತಮಾನೋತ್ಸವವನ್ನು ಇಲ್ಲಿ ಆಚರಿಸಲ್ಪಟ್ಟಿರುವುದು ಗಮನಹರಿಸಬೇಕಾಗಿದೆ. ದಶಾವತಾರಗಳನ್ನು ಈ ಅತ್ಯಮೂಲ್ಯ ಗಂಜೀಫಾ ಎಲೆಗಳಲ್ಲಿ ಮಾತ್ರ ಕಾಣಬಹುದಾಗಿದೆ. ಕರ್ನಾಟಕದಲ್ಲಿ ಶ್ರೀರಂಗಪಟ್ಟಣ ಗಂಜೀಫಾ ಚಿತ್ರಕಲೆ, ಶಿವಮೊಗ್ಗ ಸರಕಾರಿ ವಸ್ತು ಸಂಗ್ರಹಾಲಯ ಜಗನ್ಮೋಹನ ಅರಮನೆ ಮೈಸೂರು ಧರ್ಮಸ್ಥಳದ ಮಂಜೂಕ್ಷದಲ್ಲಿ ಗಂಜೀಫಾ ಎಲೆಗಳನ್ನು ನೋಡಿದಾಗ ಗಂಜೀಫಾ ಕಲೆಯ ವೈವಿಧ್ಯತೆಯನ್ನು ನೋಡಬಹುದಾಗಿದೆ.[೧]

ಇದು ಒಂದು ಕಡೆ ಕಲೆಗೂ ಮತ್ತೊಂದು ಕಡೆ ಆಟಕ್ಕೂ ಪ್ರೋತ್ಸಾಹ ನೀಡುತ್ತಿತ್ತು. ಗಂಜೀಫಾ ಬಹುಮಟ್ಟಿಗೆ ಸಂಸ್ಕೃತದ "ಕ್ರೀಡಾ ಪತ್ರ"ಕ್ಕೆ ಸಮಾನವಾದ ಆಟ, ಮೈಸೂರು ದೇಶದಲ್ಲಿ ಇದನ್ನು ದೇವರ ಆಟ ಎಂದು ಕರೆಯುತ್ತಿದ್ದರು. ಆಟದ ಎಲೆಗಳ ಮೇಲೆ ದೇವಾದಿದೇವತೆಗಳ ಕಲಾತ್ಮಕ ಚಿತ್ರಗಳನ್ನು ಬಿಡಿಸಿರಲಾಗುತ್ತಿತ್ತು.[೨] ಹಾಗೇ ಇದು ದೇವರ ಆಟ ಇದು ಭಾರತದಲ್ಲಿ ಅರಸರು, ಜಮೀನುದಾರರು, ಶ್ರೀಮಂತರು ಉಲ್ಲಾಸಕ್ಕಾಗಿ ಆಡುತ್ತಿದ್ದ

---

೧. ಎಂ.ಎಲ್. ಶಿವಶಂಕರ, ಗಂಜೀಫಾ ಕಲೆ, ಪುಟ.೨

೨. ಸಂತೋಷಕುಮಾರ ಗುಲ್ವಾಡಿ, ಗಂಜೀಫಾ ಕಲೆ, ಪುಟ.೧

ಜೂಜಾಟ, ಆದರೆ ಆಟಕ್ಕೆ ಪ್ರಾಮುಖ್ಯತೆ ಕೊಟ್ಟಂತೆ ಅದಕ್ಕೆ ಕೇಂದ್ರವಾದ ಆಟದ ಎಲೆಗಳಿಗೂ ಮಿಗಿಲಾದ ಪ್ರಶಸ್ತಿ ನೀಡಲಾಗುತ್ತಿತ್ತು. ಅವುಗಳ ಮೇಲೆ ನಿಸರ್ಗದಿಂದ ರಚಿಸಿದ ಬಣ್ಣಗಳ ಚಿತ್ರಗಳನ್ನು ಅತಿ ಕುಶಲತೆಯಿಂದ ಚಿತ್ರಗಳನ್ನು ಬಿಡಿಸುತ್ತಿದ್ದರು.

ಇದು ಭಾರತದಲ್ಲಿ ಮೊದಲು ನೆಲೆ ಕಂಡುಕೊಂಡಿತ್ತು ಎಂಬುದು ಗಂಜೀಫಾ ಎಲೆಗಳ ಮೇಲಿನ ಚಿತ್ರಕಲೆಯಿಂದ ರೂಪಿತವಾದ ಒಂದು ಊಹೆ, ಆದರೆ ಇದಕ್ಕೆ ಅರಸರ ಪ್ರೋತ್ಸಾಹ ಖಚಿತವಾದ ದೊರೆತುದು ಮೊಘಲರ ಕಾಲದಲ್ಲಿ ಗಂಜೀಫಾ ಎಂದರೆ ನಿಧಿ. ನಿಕ್ಷೇಪ. ದ್ರವ್ಯ ಎಂಬ ಮೂರು ಅರ್ಥ ನೀಡುತ್ತದೆ. ನಿಧಿಯನ್ನು ಪಣವಾಗಿ ಬಿಡ್ಡಿ ಆಡುತ್ತಿದ್ದ ಆಟ ಇದು ಅರಸರ ದರ್ಬಾರಿಗೆ ಆಟ ಸೀಮಿತವಾಗಿದ್ದು ಕಾರಣ ಇದರಲ್ಲಿ ಸೈನ್ಯವ್ಯೂಹಗಳ ರಚನೆ, ಷಡ್ಯಂತ್ರಗಳು, ಮಂತ್ರಿ, ಸೇನಾಪತಿ, ಗುಲಾಮ, ಮುಂತಾದ ಅಧಿಕಾರಿ ವರ್ಗಗಳನ್ನು ಚಿತ್ರ ಮುಖ್ಯಾಂತರ ಈ ಆಟದ ಎಲೆಗಳಲ್ಲಿ ತೋರಿಸಲಾಗುತ್ತಿತ್ತು.[೩] ಆದರೆ ವಿಶೇಷವಾಗಿ ಚಿತ್ರಕಾರರಿಗೆ ಈ ಎಲೆಗಳನ್ನು ತಯಾರಿಸಲು ಪ್ರೋತ್ಸಾಹ ದೊರೆಯುತ್ತಿತ್ತು. ಕೇವಲ ರಾಜ್ಯತ್ವದ ಹಿನ್ನೆಲೆಯಲ್ಲದೆ ದೈವತ್ವದ ಅಂಶಗಳು ಜೊತೆ ಜೊತೆಯಾಗಿ ಸೇರಿತು ಎಂದು ಹೇಳಬಹುದು.

ಇಲ್ಲಿ ವಿಶೇಷವಾಗಿ ೯೬ ಎಲೆಗಳನ್ನು ಬಳಸಿ ಆಡುವ ಆಟಗಳಲ್ಲಿ ಚಾಂಗ್ ಗಂಜೀಫ್‌ದಲ್ಲಿ ಚಿತ್ರಿಸಲಾದ ಹಾರ್ಪ್ ನಂತಹ ಬಂದು ತಂತೀವಾಧ್ಯದ ಸಂಕೇತವಾಗಿದೆ.

೧. ಮುಘಲ್ ಗಂಜೀಫಾ – ಷಮಾಶೇರ್
೨. ಓರಿಸ್ಸಾದ ಕತ್ತಿ ಚಿಹ್ನೆಯನ್ನು ಒಳಗೊಂಡಿದ್ದು – ಪೊಲ್
೩. ಪುಷ್ಪ ವಿನ್ಯಾಸದ್ದು – ಅಷ್ಟಮಾಲಾಸಾಹ
೪. ಕೃಷ್ಣ ಲೀಲೆಯನ್ನು ಚಿತ್ರಗಳು – ಏಕರಂಗ
೫. ಪರ್ಷಿಯನ್ ನಕ್ಷೆಕುಸುರಿ ಕೆಲಸ – ಎಸ್ಟೇಡೋಸ್
೬. ಪೋರ್ಚುಗೀಸರ ಖಡ್ಗ ಲಾಂಛನದ – ಹಮ್‌ರಂಗ

ಇತ್ಯಾದಿ ಪ್ರಕಾರಗಳನ್ನು ಇಲ್ಲಿ ಅನೇಕ ವಿಷಯದ ಸಂಬಂಧಿಸಿದ ಚಿತ್ರಗಳನ್ನು ನೋಡಬಹುದಾಗಿದೆ. ಶ್ರೀತತ್ವ ನಿಧಿ ಗ್ರಂಥದಲ್ಲಿ ನಿಧಿಯಾದ ಕೌತುಕ ನಿಧಿಯಲ್ಲಿ ಇದರ ಉಲ್ಲೇಖವಿದ್ದು, ನವೀನ ದಶಾವತಾರ, ನವಗ್ರಹ, ಪಂಚಪಾಂಡವ, ಕಲ್ಯಾಣ, ಅಷ್ಟಸಿದ್ದಿ ಮುಂತಾದ ಗಂಜೀಫಾದಲ್ಲಿ ಹದಿಮೂರು ಪ್ರಕಾರಗಳ ಉಲ್ಲೇಖವಿದ್ದು ಪ್ರಾರಂಭದಲ್ಲಿ ಬರುವ ಸಾಮ್ರಾಜ್ಯ ಪೇಟಿಕಾ ಗಂಜೀಫಾದ ವಿಭಾಗದಲ್ಲಿ ಏಳು ಪ್ರಕಾರಗಳನ್ನು ಆಡುವ ಕ್ರಮಗಳನ್ನು ಕೆಳಗೆ ಹೇಳಲಾಗಿದೆ.

---

೩. ಕೃಷ್ಣೇಗೌಡ ಎಚ್.ಎನ್., ಗಂಜೀಫಾ ಚಿತ್ರಕಲೆ, ಪುಟ.೩

೧. ದಶಾವತಾರ

೨. ಚಾಮುಂಡೇಶ್ವರಿ

೩. ಜಗನ್ಮೋಹಿನಿ

೪. ಅಷ್ಟೈಶ್ವರ್ಯ

೫. ಕಲ್ಯಾಣ

೬. ಅಷ್ಟಸಿದ್ಧಿ

೭. ಸಾರಸಂಗ್ರಹ

ಅದರ ಕೆಳಗೆ ಮೇಷ, ವೈಷ್ಣವ, ಮಿಥುನ, ಕರ್ನಾಟಕದಲ್ಲಿ ಇತ್ಯಾದಿ ಆದರೆ ೧೨ ರಾಶಿಗಳ ಲಾಂಛನವನ್ನು ಎಲೆಗೊಂದರಂತೆ ಚಿತ್ರಿಸಲಾಗಿರುತ್ತದೆ. ಉಳಿದ ೨೯ ಬಾಜುಗಳಿಗೆ ವಿಷ್ಣು ದಶಾವತಾರದ ವಿಘ್ನೇಶ್ವರ ಇತ್ಯಾದಿ ೨೯ ದೇವತೆಗಳ ಚಿತ್ರವಿದ್ದು, ಇಲ್ಲಿಯೂ ಪ್ರತಿಯೊಂದಕ್ಕೂ ೬ ಹುಕುಮಿ ಎಲೆ ೧೨ ಖರ್ಚಿ ಎಲೆಗಳಿರುತ್ತವೆ. ಇಲ್ಲಿಯ ವೈಶಿಷ್ಟ ಎಂದರೇ ಆಯಾಯ ದೇವತೆಗಳು ಅವರವರ ರಾಣೀಯರು ಪಲ್ಲಕ್ಕಿಯಲ್ಲೂ ಮಂತ್ರಿಗಳು ರಥವ ಮೇಲೂ ಸೇನಾಪತಿಗಳು ಕುದುರೆಯ ಮೇಲೂ ಪದ್ಧತಿಗಳು ಚೌಕಿಯ ಮೇಲೂ ಧ್ವಜವನ್ನು ಹಿಡಿದಿರುವ ಚಿತ್ರ, ದೇವಾದಿದೇವತೆಗಳು ಕೋಟಿ ಮೇಲೆ ಇರುವದನ್ನು ಇಲ್ಲಿ ಗಮನಿಸಬಹುದಾಗಿದೆ.

ಹೆಚ್ಚು ಬಳಕೆಯಿರುವ ದಶಾವತಾರದ ಗಂಜೀಫಾ ಆಟದಲ್ಲಿ, ೧.ಮತ್ಸ್ಯ, ೨.ಕೂರ್ಮಾ, ೩.ವರಾಹ, ೪.ನರಸಿಂಹ, ೫.ವಾಮನ, ೬.ಪರಶುರಾಮ. ೭.ರಾಮ, ೮.ಕೃಷ್ಣ, ೯.ಬುದ್ಧ, ೧೦.ಕಲ್ಕಿ, ಈ ಹತ್ತು ಅವತಾರಗಳಿಗೆ ಪ್ರತಿಯೊಂದಕ್ಕೂ ರಾಜಾ, ವಜೀರ್ ಮತ್ತು ಎಕ್ಕದಿಂದ ಹತ್ತು ಈ ಪ್ರಕಾರ ೧೨ ಎಲೆಗಳನ್ನು ಸೇರಿಸಿ ಒಟ್ಟು ೧೨೦ ಎಲೆಗಳನ್ನು ಉಪಯೋಗಿಸಿಕೊಂಡು ಚಿತ್ರ ರಚಿಸುತ್ತಿದ್ದರು. ಮೂರು ಜನ ಆಟಗಾರರು ಸರತಿಂತೆ ಎಲೆಗಳನ್ನು ಹಂಚಿಕೊಳ್ಳುತ್ತಾರೆ. ಹಗಲಿನಲ್ಲಿ ಆದ ಆರಂಭಿಸಿದರೆ ಯಾರ ಕೈಯಲ್ಲಿ ರಾಮ-ರಾಜ ಎಲೆ ಬಂದಿರುತ್ತದೋ ಅವನ್ನು ಮೊದಲು ಪ್ರಾರಂಬಿಸುತ್ತಾನೆ ಆತನಿಗೆ ಸುರ್ಕ್ಯಾ ಎಂದು ಹೆಸರಲ್ಲಿ ಕರೆಯುತ್ತಿದ್ದರು. ಆತ ಪ್ರಥಮವಾಗಿ ರಾಮ-ರಾಜ ಮತ್ತು ಅದೇ ವರ್ಗದ ಇನ್ನೊಂದು ಕಡಿಮೆ ಬೆಲೆಯ "ಹಲ್ಕಾ" ಎಲೆಯನ್ನು ಇಳಿಸುತ್ತಾನೆ. ಉಳಿದ ಆಟಗಾರರು ತಮ್ಮ ಕೈಯಲ್ಲಿದ್ದ ಎರಡೆರಡೂ "ಹಲ್ಕಾ" ಎಲೆಗಳನ್ನು ಮೊದಲನೆಯ ಎಲೆಯ ಮೇಲೆ ಚಿತ್ರಗಳನ್ನು ಬಿಡಿಸುತ್ತಿದ್ದರು. ಈ ಪ್ರಕಾರ ಆರು ಎಲೆಗಳನ್ನು ಸುರ್ಕ್ಯಾ ಹೊಂದುತ್ತಾನೆ. ಕೊನೆಯಲ್ಲಿ ಹೆಚ್ಚಿನ ಎಲೆಗಳನ್ನು ಯಾರು ಪಡೆಯುತ್ತಾರೆ ಅವರು ಗೆದ್ದಹಾಗೆ, ಗಂಜೀಫಾ ಆಟಗಳ ವಿಧಾನ ಸ್ಥಳದಿಂದ ಸ್ಥಳಕ್ಕೆ ಭಿನ್ನ ಭಿನ್ನವಾಗಿ ಆಟವನ್ನು ಆಡುವುದು ತೋರಿಸಿಕೊಟ್ಟಿದ್ದಾರೆ.

ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು ಆಡುತ್ತಿದ್ದ ಸ್ವತಃ ಸೃಷ್ಟಿಸಿದ್ದ ಆಟಗಳು ದಶಾವತಾರ ಚಿತ್ರಗಳು ೨೪೦, ನವಗ್ರಹ ಚಿತ್ರಗಳೂ, ೨೧೦ ದೇವೀಯ ದಶಾವತಾರ ಚಿತ್ರಗಳು ೧೮೦, ಹೀಗೆ ಹಲವಾರು ಚಿತ್ರಗಳ ಬಗ್ಗೆ ಚಿತ್ರಗಳನ್ನು ಬಿಡಿಸುತ್ತಿದ್ದರು. ಕರ್ನಾಟಕದಲ್ಲಿ ಒಂದು ಕಾಲದಲ್ಲಿ ಜನಪ್ರಿಯಾವಾಗಿದ್ದ ಈ ಆಟ ಈಗ ತುಂಬಾ ವಿರಳವಾದದು. ಇದರ ಮಾದರಿ ಎಲೆಗಳ ಮೈಸೂರಿನಲ್ಲಿನ ಜಗನ್ಮೋಹನ ಅರಮನೆಯ ಕಲಾ ಶಾಲೆಯಲ್ಲೂ, ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಜಾನಪದ ವಸ್ತು ಸಂಗ್ರಾಹಾಲಯ, ಧರ್ಮಸ್ಥಳ ಮಂಜುಷಾ ಖಾಸಗಿ ವಸ್ತು ಸಂಗ್ರಹಾಲಯದಲ್ಲಿಯೂ ಮತ್ತು ಶ್ರೀರಂಗಪಟ್ಟಣದ ಗಂಜೀಫಾ ಗಾಲ್ಯರಿ ಮುಂತಾದ ಸ್ಥಳಗಳಲ್ಲಿ ಕಂಡುಬರುತ್ತವೆ.

**ಮಂಜುಷಾ ವಸ್ತು ಸಂಗಾಹಾಲಯ ಧರ್ಮಸ್ಥಳ**

ಕೊಂಕಣದ ಸಾವಂತವಾಡಿಯ ಸುಮಾರು ನೂರು ವರ್ಷ ಹಳೆಯ ದಶಾವತಾರ ಗಂಜೀಫಾ ಎಲೆಗಳನ್ನು ಮಂಜೇಶ್ವರಿ ದಿನಕರರಾವ್‌ರವರು ಮಂಜುಷಾಕ್ಕೆ ಧಾನಮಾಡಿದ್ದಾರೆ. ತೆರೆಮರೆಗೆ ಸರಿಯುತ್ತಿರುವ ಗಂಜೀಫಾ ಆಟದ ೧೯೧ ಎಲೆಗಳು ಮಂಜುಷಾದಲ್ಲಿವೆ. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಚಾಮುಂಡೇಶ್ವರಿ ಗಂಜೀಫಾ ಚಿತ್ರಗಳು, ದಶಾವತಾರದ ಚಿತ್ರಗಳು, ನವರತ್ನ ಚಿತ್ರಗಳು ಇವುಗಳು ಪ್ರಸಿದ್ಧವಾಗಿದ್ದು ಇಲ್ಲಿ ಸೂಕ್ಷ್ಮ ರೇಖೆ, ವರ್ಣ, ಸಂಯೋಜನೆ ಸೌಂದರ್ಯ ಇಂತಹ ಹಲವು ಅಪೂರ್ವ ಗಂಜೀಫಾಗಳು ಇಲ್ಲಿ ಕಾಣಬಹುದಾಗಿದೆ.

ಮೈಸೂರು ಶೈಲಿ ಎಂಬುದು ಮುಮ್ಮಡಿಯವರ ಕಾಲದಲ್ಲಿ ರೂಪಗೊಂಡಿತ್ತು. ಉತ್ತರ ಭಾರತದಲ್ಲಿ ಕಂಡು ಬರುವ ಸ್ಥಳಗಳು ಹೀಗೆ ಕೆಳಗಿನಂತೆ ಹೇಳಬಹುದು.

೧. ರಾಜಸ್ಥಾನ

೨. ಮುಘುಲ್

೩. ಪಹಾಡಿ

೪. ಕಾಂಗ್ರಾ

೫. ಚಿಕಣಿ

೬. ದಖ್ಖಿಣಿ.

ಇದೇ ರೀತಿಯ ಒಂದು ಹೆಜ್ಜೆ ಮುಂದೆ ಹೋಗಿ ಮೈಸೂರು ಶೈಲಿ ಬೆಳೆಯಲು ಪ್ರಾರಂಭವಾಯಿತು. ಅದೇ ರೀತಿಯಲ್ಲಿ ಗಂಜೀಫಾ ಇಸ್ಪೀಟು ಎಲೆಯ ಕಲೆಯೂ ಬೆಳೆಯಿತು. ಅದನ್ನು ಸ್ವತಃ ಮುಮ್ಮಡಿ ಕೃಷ್ಣರಾಜ ಒಡೆಯರ್ (೧೭೯೪–೧೮೬೮) ಆಡುತ್ತಿದ್ದರಂತೆ ಹಾಗಾಗಿ ಈ ಕಲೆಗೆ ಪ್ರೋತ್ಸಾಹ ದೊರೆಯಿತು. ಈ ಗಂಜೀಫಾ ಕಲೆಯನ್ನು ಪುನರುಜ್ಜೀವಿತಗೊಳಿಸಿದವರು

ನಾಗಮಂಗಲದ ರಘುಪತಿ ಭಟ್ಟರು. ಇವರು ಗಂಜೀಫಾ ರಘುಪತಿ ಎಂದೇ ಹೆಸರಾಗಿ ದೇಶ ವಿದೇಶದಲ್ಲಿ ಪ್ರಸಿದ್ಧವಾದವರು ಎಂದು ಹೇಳಲಾಗಿದೆ.

### ಆರು ಭದ್ ಎಲೆಗಳು

ಕರ್ನಾಟಕದ ಮೈಸೂರು ೧೯ನೆಯ ಶತಮಾನದ ಪೂರ್ವಾರ್ಧದ ಅರಗಿನ ಮತ್ತು ಮೆರಗು ಕೊಟ್ಟ ಎಲೆ ಕಂಡುಬಂದಿದೆ. ೭೩-೭೬ ಮಿ.ಮೀ. ಸುತ್ತಳತೆಯ ಇದರ ಹಿಂಭಾಗ ಕೆಂಪು ವರ್ಣದಲ್ಲಿದ್ದು, ಅದು ಆರು ಎಲೆಗಳ ಪ್ರತ್ಯೇಕವಾದ ಕಟ್ಟಿನದು (ಪ್ರಾಕ್‌ನದು). ಈ ಆರು ಸಡಿಲವಾದ ಎಲೆಗಳಲ್ಲಿ ಮೊದಲ ಮೂರು ಎಲೆಗಳು ಚಾಮುಂಡೇಶ್ವರಿ ಭದ್‌ಗಳಾಗಿರಬಹುದು. ಮಿಕ್ಕ ಎಲೆಗಳನ್ನು ಸರಿಯಾಗಿ ಗುರುತಿಸಲಾಗುವುದಿಲ್ಲ.

೧. ಮನ್ಮಥ ಕಾಮದೇವ ಚಾಮುಂಡೇಶ್ವರಿ ಗಂಜೀಫಾ ಪ್ಯಾಕಿನ (ಕಟ್ಟಿನ) ೧೫ನೇಯ ಹಾಗೂ ೧೬ನೇ ಕಟ್ಟಿನ ಅದಿದೇವತೆ, ದೇವತೆಯು ಕಬ್ಬಿನ ಬಿಲ್ಲನ್ನು ಹಿಡಿದು ಅನೇಕ ಮೊನೆಗಳ್ಳೂ ಬಾಣದಿಂದ ಕೂಡಿಸಿದ್ದಾನೆ. ಹಸಿರು ವರ್ಣದವನು ಎಂದು ಇಲ್ಲಿ ಹೇಳಲಾಗಿದೆ.

೨. ಮೈಸೂರು ಒಡೆಯರ ಅಧಿದೇವತೆ ಚಾಮುಂಡೇಶ್ವರಿ ಭದ್‌ದಲ್ಲಿಯ ಪ್ರಥಮ ಎಲೆ ಹಾಗೂ ಆಗಾಗ್ಗೆ ದೊರೆಯುತ್ತದೆ. ಈ ಎಲೆಯನ್ನು ಹೊಂದಿದವನ್ನು ಆಟವನ್ನು ಪ್ರಾರಂಭಿಸುತ್ತಾನೆ. ಈ ದೇವತೆಯು ಸಿಂಹಾಸನದಲ್ಲಿ ಆಸೀನಳಾಗಿದ್ದು ಆಯುಧಗಳನ್ನು ಹಿಡಿದವಳಾಗಿ ಮಹಿಷನನ್ನು ತ್ರಿಶೂಲದಿಂದ ಸಾಯಿಸುತ್ತಿದ್ದಾಳೆ. ದೇವತೆ ಅಗ್ನಿ ಜ್ವಾಲೆಯ ಕಿರೀಟವನ್ನು ಧರಿಸಿದ್ದಾಳೆ.

೩. ಬಾಲಕೃಷ್ಣ, (ಬಾಳೆ, ಎಲೆ ಮೇಲೆ) ವಟಪತ್ರಶಾಹಿ ಹರಿ ಎಂದು ಹೇಳಬಹುದಾಗಿದೆ. ೧೨ನೇಯ ಎಲೆಯಾಗಿ ಚಕ್ರವರ್ತಿ ಅಥವಾ ಸ್ವತಂತ್ರ ಎಲೆಯಾಗಿ ಜಗನ್ಮೋಹನ ಭದ್‌ನಲ್ಲಿದೆ. ೩೬೦ ಎಲೆಗಳನ್ನು ಹೊಂದಿದೆ ಪ್ಯಾಕ್ (ಕಟ್ಟು) ನಲ್ಲಿ ೨೭ ಚಕ್ರವರ್ತಿಗಳು ಈ ಎಲೆಗಳು ಸ್ವತಂತ್ರ ಎಲೆಗಳು ಈ ಎಲೆಯ ವರ್ಣ ೧೮ನೇಯ ಶತಮಾನದ ದಕ್ಷಿಣ ಭಾರತದ ನಾಯಕರ ಶೈಲಿಯನ್ನು ಅನುಸರಿಸುತ್ತದೆಂದು ಹೇಳಬಹುದಾಗಿದೆ.

೪. ಮೋಹಿನಿ-ಮೀನು ಕೊನೆಯ ಎಲೆಯದಾಗಿದ್ದು, ೧೬ನೇಯ ಕಟ್ಟುಕಡೆಯ ಗಂಜೀಫಾದ ಚಾಮುಂಡೇಶ್ವರಿ ಭದ್‌ದಲ್ಲಿ ಸೋಟ್ ಆಗಿದೆ. ವಿಶೇಷ ಮಹತ್ವವುಳ್ಳದ್ದಾಗಿದೆ. ಮೋಹಿನ ನಾಲ್ಕು ಮೀನುಗಳಿಂದ ಆವೃತಗಳಾಗಿದ್ದಾಳೆ, ಇದು ಮೀನು ರಾಶಿಯ ಸೂಚಕ ಈ ಸೂಟ್ ಕಂಡು ಹಸಿರು ವರ್ಣದಿಂದ ಚಿತ್ರಗಳ ರಚನೆ ಮಾಡಲಾಗಿದೆ.

೫. ಎರಡು ರೆಕ್ಕೆಗಳ ಹಾವುಗಳುಳ್ಳ ಉಲ್ಲೇಖಗಳು ಜಗನ್ಮೋಹನ ಪ್ಯಾಕ್‌ನಲ್ಲಿದಾಗಿವೆ. ಐದನೇಯ ಸೂಟ್, ಭದ್ ತಾಂಡೇಶ್ವರರನ್ನು ಅಧ್ಯಕ್ಷನನ್ನಾಗಿ ಮಾಡಿದೆ. ಈ ರೀತಿಯನ್ನು

ಚಿಹ್ನೆಗಳು ಇತರೆ ಭದ್‌ಗಳಲ್ಲೂ ಚಿತ್ರಗಳನ್ನು ಮಾಡುತ್ತಿದ್ದರು. ಹೀಗೆ ಹಲವಾರು ಚಿತ್ರಗಳನ್ನು ರಚಿಸಿದ್ದು ಗಂಜೀಫಾ ಇಸ್ಪೀಟಿನ ಎಲೆಗಳನ್ನು ರದ್ದಿ ಕಾಗದದಿಂದ ತಯಾರಿಸುತ್ತಿದ್ದರು.

ಗಂಜೀಫಾ ಚಿತ್ರಕಲಾವಿದರ ದಶಾವತಾರ ಎಲೆಗಳ ೧೨, ೧೬, ಮತ್ತು ೨೦ ಸೂಟ್‌ಗಳಿವೆ. ಉಳಿದವುಗಳು ಹಲವು ದೇವತೆಗಳನ್ನು ಮತ್ತು ವೀರರನ್ನು ಪ್ರತಿನಿಧಿಸುತ್ತದೆ. ಗಂಜೀಫಾ ಮತ್ತು ಗಂಜಪ್ಪಾ ಎಂದು ಲೋಕೋರೂಢಿಯಲ್ಲಿರುವ ಮೊಘಲ್ ಗಂಜೀಫಾ ಮೂಲ ಅರ್ಥವನ್ನು ಕಳೆದುಕೊಂಡು ಹಿಂದುತ್ವ ಹೊಂದಿದೆ. ಗುಲಾಮ್ ಮತ್ತು ಗುಲಾಬ್ ಆಗಿ ಪರಿವರ್ತಿತವಾಗಿದೆ. ಸೂಟ್ ಚಿಹ್ನೆ ಪುಷ್ಪವಾಗಿದೆ. ಸೋನೆಪೂರ ಇನ್ವೇಟ್ ಎಲೆಗಳು ರಾಮಾಯಣ ಗಂಜೀಫಾ ಎನಿಸುತ್ತವೆ. ಇದರಲ್ಲಿ ರಾಮಾರಾವಣರ ಕಾಳಗದ ಚಿತ್ರವಿದೆ. ಕರ್ನಾಟಕದ ಶ್ರೀರಂಗಪಟ್ಟಣದ ದಶಾವತಾರ ಗಂಜೀಫಾ ಎಲೆಗಳು ಆಕಾರದಲ್ಲಿ ೯೨ ೧೧೦ ಮಿ.ಮೀ.ಇದ್ದು ಆಕೃತಿಯ ಅವತಾರಗಳನ್ನು ಇದರ ಮೇಲೆ ಚಿತ್ರಿಸಲಾಗಿದೆ. ಅವತಾರಗಳನ್ನು ಚಿತ್ರಿಸಿ ಅವುಗಳ ಚತುರ್ಭುಜಗಳು ಮತ್ತು ತ್ರಿಭುಜಗಳು ವಿವಿಧ ಬಗ್ಗೆಯ ಆಯುಧಗಳನ್ನು ಬಳಸಿಕೊಂಡ ದಶಾವತಾರದ ಚಿತ್ರಗಳನ್ನು ರಚಸಿರುವುದು ಕಾಣಬಹುದಾಗಿದೆ. ಪಲ್ಲಕಿ ಮೇಡಿ ದಶವತಾರ ಗಂಜೀಫಾಗಳು ಈ ರೀತಿ ಇವೆ.

೧. ಮತ್ಸ್ಯ – ಕಪ್ಪು
೨. ಕೂರ್ಮಾ – ಆಲಿವ್
೩. ವರಾಹ – ಹಳದಿ – ನಸುಗೆಂಪು
೪. ನರಸಿಂಹ – ನೀಲಿ
೫. ವಾಮನ – ಹಳದಿ
೬. ಪರಶುರಾಮ – ಶ್ವೇತ
೭. ರಾಮ – ಕೆಂಪು
೮. ಬಲರಾಮ – ಪಿಂಕ್
೯. ಜನನ್ನಾಥ – ಹಸಿರು
೧೦. ಕಲ್ಕಿನ್ – ಕ್ರಿಮಾಸನ್ (ಕಡುಗೆಂಪು)

ಇದೇ ರೀತಿಯಾಗಿ ಅವತಾರಗಳಲ್ಲಿ ಜನನ್ನಾಥನ ಅವತಾರ ಒಂಭತ್ತನೆಯದಾಗಿದ್ದು ಶ್ಯಾಮಲ ವರ್ಣ ಹಾಗೂ ದೊಡ್ಡ ಕಣ್ಣುಗಳುಳ್ಳದಾಗಿದ್ದು ಹಿಂಭಾಗ ಪುಷ್ಪದಿಂದ ಕೂಡಿದಂತೆ, ವಿವಿಧ ರೀತಿಯ ವಿನ್ಯಾಸ ಅಲಂಕಾರ ಮಾಡಲಾಗಿದೆ. ಈ ರೀತಿಯ ಚಿತ್ರಗಳುಳ್ಳ ಎಲೆಗಳ ಪಲ್ಲಕ್ಕಿ ಮೇಡಿಯ ಭೋಗ ವಸ್ತು ಸೆಟ್ಟಿನದಾಗಿದೆ. ಪಲ್ಲಕ್ಕಿ ಮೇಡಿಯದಲ್ಲಿಯ ೯೫ ಮೀ.

ಸುತ್ತಳತೆಯ ೧೯ನೇ ಶತಮಾನದ ಮರದ ಪಟ್ಟಿಗೆ ಕಂಡುಬಂದಿದೆ.

ಅಂಚು ೨೫ನೇ ಸೆವ್ ರೀತಿಯಲ್ಲಿ ಪುಷ್ಪ ಮತ್ತು ಎಲೆಯ ಸುರಳಿಯ ಆಕಾಶವಿದೆ. ಹಿಂಭಾಗ ಸಹ ೨೫ನೇ ಸೆವ್ ರೀತಿಯಲ್ಲಿದೆ. ಆದರೆ ನೆಲದ ವರ್ಣ ಕೆಂಪು ಈ ಪೆಟ್ಟಿಗೆ ಮಹಾಕಾವ್ಯಗಳ ದೃಶ್ಯಗಳು, ರಾಮ ರಾವಣರ ಕಾಳಗವನ್ನು ಮುಚ್ಚಳದ ಮೇಲೆ ಮತ್ತು ಪಕ್ಕದ ಪಟ್ಟಿಕೆಗಳಲ್ಲಿ ದಶಾವತಾರದ ದೃಶ್ಯಗಳನ್ನು ಚಿತ್ರಸಿದ್ದಾರೆ.

| ಸೂಟ್ | ಬಣ್ಣ | ಪ್ರತಿಮಾ ಶಿಲ್ಪಶಾಸ್ತ್ರ | ಸೂಟ್ ಚಿಹ್ನೆ |
|---|---|---|---|
| ಮತ್ಸ್ಯ | ಕಪ್ಪು | ಬಿಳಿ, ಮೀನು ದೇಹ | ಮೀನು |
| ಕೂರ್ಮ | ಹಳದಿ | ಹಳದಿ, ಆಮೆ ದೇಹ | ಆಮೆ |
| ವರಾಹ | ಹಸಿರು | ಹಸಿರು, ವರಾಹ, ತಲೆ | ಶಂಖ |
| ನರಸಿಂಹ | ಬಿಳಿ | ಎಲೆಗೆಂಪು, ಸಿಂಹ ತಲೆ | ಚಕ್ರ |
| ವಾಮನ | ನೀಲಿ | ನೀಲಿ, ಬ್ರಾಹ್ಮಣ | ಕಮಂಡಲ |
| ಪರಶುರಾಮ | ಕೆಂಪು | ಹಳದಿ | ಪರಶು |
| ರಾಮ | ಕಪ್ಪು | ಹಸಿರು | ಬಾಣ |
| | ಗಾಢ ಹಳದಿ | | |
| ಬಲರಾಮ | ತೆಳುಕಂದು | ಬಿಳಿ | ಮುಸಲ |
| ಜಗನ್ನಾಥ | ಕಂದು | ಕಪ್ಪು ಮುಖ, ಗೊಂಬೆ | ಪದ್ಮ |
| ಕಲ್ಕಿನ್ | ಇಟ್ಟಿಗೆ ಕೆಂಪು | ಶ್ವೇತಾಶ್ವ ಮತುತ ಖಡ್ಗ | ಖಡ್ಗ |

ದಶಾವತಾರ ಗಂಜೀಫಾ ಎಲೆಗಳ ಸುಮಾರು ೧೭ನೇ ಶತಮಾನಕ್ಕೆ ಪ್ರಸಿದ್ಧಿಗೆ ಬಂದಿತ್ತೆಂದು ಹೇಳಬಹುದು ದಶಾವತಾರ ಎಲೆಗಳು ಕರ್ನಾಟಕದಲ್ಲಿ ಬರುತ್ತದೆ. ೮.೯.೧೦ ಸೂಟಿಸ್ಟ್ ಸೆಟ್‌ಗಳನ್ನು ಗಂಜೀಫಾ ಚಿತ್ರಗಳು ಈಗಲೂ ಇರುತ್ತವೆ. ಮುಮ್ಮಡಿ ಕೃಷ್ಣರಾಜ ಒಡೆಯರ, ಛದ್ ಆಟದಲ್ಲಿ ೩೬೦ ಎಲೆಗಳ ಪ್ಯಾಕ್‌ನಲ್ಲಿ ಕರ್ನಾಟಕದ ದೇವಾದಿದೇವಿಯರನ್ನು ಸಕಲ ದೇವತೆಗಳು ಚಿತ್ರೀಕರಿಸಲ್ಪಟ್ಟಿದ್ದವು. ಸಾಮಾನ್ಯವಾಗಿ ಕರ್ನಾಟಕದ ಗಂಜೀಫಾ ಎಲೆಯ ಹಿಂಭಾಗ ಕೆಂಪು ಕಿತ್ತಳೆ ವರ್ಣದಿಂದ ಚಿತ್ರಿತವಾಗಿರುತ್ತದೆ. ಬೆಲೆಬಾಳುವ ಗಂಜೀಫಾ ಎಲೆಗಳನ್ನು ನಯವಾದ ದಂತ, ಆಮ್, ಚಿಪ್ಪು, ಮದರ್, ಆಫ್, ಪರ್ಲ್, ಕಪ್ಪೆಚಿಪ್ಪು ಒಳ ಪಕ್ಕದಲ್ಲಿ ನಯವಾದ ಮೇಲ್ಮೈ ವರ್ಣದಿಂದ ಚಿತ್ರಗಳನ್ನು ಕಾಣಬಹುದಾಗಿದೆ. ಎಲೆಗಳನ್ನು ಚೆನ್ನಾಗಿ ಕಿತ್ತನೆ ಮಾಡಿದ ಮರದ ಪಟ್ಟಿಗಳು ಅಥವಾ ತೆಳು ಪಾರದರ್ಶಿತ ಬಲು ತೆಳ್ಳನೆಯ ಅರಗನ್ನು ಎಲೆಗಳನ್ನಾಗಿ ಉಪಯೋಗಿಸುತ್ತಿದ್ದರು. ಕಡಿಮೆ ಖರ್ಚಿನ ಎಲೆಗಳನ್ನು ಕಡ್ಡಿ, ಕಾಗದ, ರದ್ದಿ ಚಿಂದಿ ಬಟ್ಟೆಗಳು

ಚರ್ಮ, ಮೀನಿನ ಪೊರೆ ಮತ್ತು ತಾಳೆ ಮರದ ಎಲೆಗಳನ್ನು ಉಪಯೋಗಿಸುತ್ತಿದ್ದರು. ೧೮ನೇ ಶತಮಾನದಲ್ಲಿ ದಾಖಲೆಗಳು, ಹಳೆಯ ಭಾರತೀಯ ಲೆಕ್ಕ ಪತ್ರ ಮತ್ತು ಸರ್ಕಾರದ ಪಟ್ಟಿ ಪುಸ್ತಕಗಳು ಕಾಗದಗಳು ಸಹ ಎಲೆಗಳನ್ನು ತಯಾರಿಸಲು ಉಪಯೋಗಿಸಿಕೊಂಡು ಚಿತ್ರರಚನೆ ಮಾಡುತ್ತಿದ್ದರು.

## ಬಣ್ಣಗಳ ತಯಾರಿಕಾ ವಿಧಾನ

ಗಂಜೀಫಾ ಎಲೆಗಳನ್ನು ತಯಾರಿಸಲು ಬಣ್ಣಗಳನ್ನು ಸ್ವತಃ ತಯಾರಿಸಿಕೊಳ್ಳಲು ದೀಪಾದ ಚಿವಣಿ, ತಗಡಿನ ಪ್ಲೇಟು, ಗಂಧದ ಕೇರಡು, ಅಡಿಕೆ ಕತ್ತರಿ, ಬೇಲದ ಕಾಯಿ, ಬಿಲ್ವಪತ್ತೆ ಕಾಯಿ, ವಿವಿಧ ಮರಗಳಿಂದ ಆಯ್ದ ಅಂಟಿನ ಬೇವಿನ ಎಲೆ, ವೀಳ್ಯದ ಎಲೆ, ಬಾಳೆ ಎಲೆ, ಬಾಳೆಯಸಿಪ್ಪೆ, ಶಂಖದ ಚೂರ್ಣ, ಸುಣ್ಣ, ಕೆಮ್ಮಣ್ಣು, ಸಪೇದ್ ಪೌಡರ್, ರಬ್ಬರ, ಬಿಳಿಮಣ್ಣು, ಕಪ್ಪುಚಿಪ್ಪು, ಅರಿಷಿಣ, ಇಂಗಳೀಕ, ಕೆಂಪುಪುಡಿ, ರಕ್ತಚಂದನ, ಇತ್ಯಾದಿ ಪದಾರ್ಥಗಳನ್ನು ಬಳಸಿಕೊಂಡು ಅವುಗಳಲ್ಲಿ ಕೆಲವನ್ನು ಪುಡಿಮಾಡಿ ನೀರಿನಲ್ಲಿ ಕರಗಿಸಿ, ನೆರಳಿನಲ್ಲಿ ಒಣಗಿಸಿ ಚೆನ್ನಾಗಿ ಹುರಿದು ಹದಮಾಡಿ ಮಣ್ಣಿನ ಬಟ್ಟಲುಗಳಲ್ಲಿ ತುಂಬಿಕೊಂಡು ಬಿಡುತ್ತಾರೆ. ಈ ಮೇಲಿನ ಮೂಲ ವಸ್ತುಗಳನ್ನು ಬಳಸಿಕೊಂಡು ಕೆಂಪುಬಣ್ಣ, ನೀಲಿಬಣ್ಣ, ಹಳದಿಬಣ್ಣ, ಹಸಿರುಬಣ್ಣ, ಕಪ್ಪು ಬಣ್ಣಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಇವುಗಳ ಮಿಶ್ರಣದಿಂದ ಇನ್ನೂ ಅನೇಕ ಬಣ್ಣಗಳನ್ನು ತಯಾರಿಸಿಕೊಳ್ಳುತ್ತಿದ್ದರು.

**ಕೆಂಪುಬಣ್ಣ:** ಸುಣ್ಣ ಮತ್ತು ಅರಿಷಿಣ ಎರಡನ್ನು ಮಿಶ್ರಣ ಮಾಡಿದರೆ ಅದರಿಂದ ಕೆಂಪುಬಣ್ಣ ಉಂಟಾಗುತ್ತದೆ. ನಂತರ ಗಾಢವಾಗಿ ಬೇಕೆಂದರೆ ಮಿಶ್ರಣದಲ್ಲಿ ವ್ಯತ್ಯಾಸ ಮಾಡಿ ಅದಕ್ಕೆ ಮರದ ಅರಿವನ್ನು ಕರಗಿಸಿ ಮಿಶ್ರಣ ಮಾಡುತ್ತಾರೆ. ಹಾಗೆಯೆ ಅರಿಷಣ ಮತ್ತು ರಕ್ತಚಂದನ ಮಿಶ್ರಣ ಮಾಡಿದರೆ ಕೆಂಪು ಬಣ್ಣವನ್ನು ತಯಾರಿಸಬಹುದು.

**ನೀಲಿಬಣ್ಣ:** ಶಂಕದ ಹೂವನ್ನು ಒಣಗಿಸಿ ಪುಡಿಮಾಡಿ ಅದಕ್ಕೆ ಅಂಟನ್ನು ಮಿಶ್ರಣ ಮಾಡುತ್ತಾರೆ. ಹೂಲಿಗಿಡದ ನೀಲಿಹಣ್ಣಿನಿಂದ ತಯಾರಿಸಿಕೊಳ್ಳುತ್ತಿದ್ದರು.

**ಹಳದಿಬಣ್ಣ:** ಗಿಡದ ಅಂಟನ್ನು ಬೆರಸಿ ಹಾಗೆ ಹಳದಿಯಲ್ಲಿ ಹಲವಾರು ವ್ಯತ್ಯಾಸ ಬಣ್ಣಗಳು ಬೇಕಾದರೆ ಒಣಗಿದ ಎಲೆಗಳನ್ನು ಒಟ್ಟು ಮಾಡಿ ಪುಡಿಮಾಡಿ ತಯಾರಿಸಬಹುದು. ಬಾಳೆಹಣ್ಣಿನ ಸಿಪ್ಪೆ ಅಥವಾ ಎಲೆಯಿಂದಲೂ ಸಹ ಹಳದಿ ಬಣ್ಣವನ್ನು ತಯಾರಿಸಬಹುದು.

**ಹಸಿರುಬಣ್ಣ:** ಹಸಿ ಇರುವ ಎಲೆಗಳನ್ನು ಒಟ್ಟುಗೂಡಿಸಿ ನೆರಳಲ್ಲಿ ಅದನ್ನು ಪುಡಿಮಾಡಿ ನಂತರ ಅದಕ್ಕೆ ಅಂಟನ್ನು ಬೆರಸಿದರೆ ಹಸಿರಿನ ವಿಭಿನ್ನ ಬಣ್ಣ ಸಿಗುತ್ತದೆ. ಬೇವಿನ ಎಲೆಯನ್ನು ಪುಡಿಮಾಡಿ ಕಲಸಿಕೊಳ್ಳಲೇಬೇಕು. ನಂತರ ಹಲವಾರು ರೀತಿಯ ಹಸಿರು ಬಣ್ಣವನ್ನು ತಯಾರಿಸಬಹುದು. ಕೆಲವು ಹಸಿರು ಕಲ್ಲಿನ ಪುಡಿಮಾಡಿ ಅಂಟನ್ನು ತಯಾರಿಸುತ್ತಾರೆ.

ಕಪ್ಪುಬಣ್ಣ: ಉರಿಯುತ್ತಿರುವ ಲ್ಯಾಂಪ್ ಅಥವಾ ಚಿಮಣಿಗೆ ಮೇಲೆ ಒಂದು ತಗಡಿನ ಪ್ಲೇಟನ್ನು ಹಿಡಿದು ಆ ಪ್ಲೇಟಿನ ಮೇಲೆ ಕುಳಿತು ಬೆಟ್ಟನ್ನು ತೆಗೆದು ನಂತರ ಅದಕ್ಕೆ ಅಂಟನ್ನು ಬೆರೆಸಿ ಕಪ್ಪು ಬಣ್ಣವನ್ನು ತಯಾರಿಸುತ್ತಾರೆ.

ಬಿಳಿಯಬಣ್ಣ: ಸುಣ್ಣಕ್ಕೆ ಆಲದ ಮರದ ಅಂಟನ್ನು ಮಿಶ್ರಣ ಮಾಡಿ ತಯಾರಿಸುತ್ತಿದ್ದರು. ಸುಣ್ಣವನ್ನು ಕಲ್ಲಿನಿಂದ ಪುಡಿಮಾಡಿ ಅದಕ್ಕೆ ಅಂಟನ್ನು ಮಿಶ್ರಣ ಮಾಡಿ ಬಿಳಿ ಸುಣ್ಣವನ್ನು ತಯಾರಿಸುತ್ತಿದ್ದರು. ಹಾಗೆಯೇ ಸಪೇದ್ ಪೌಡರ್ ಅದಕ್ಕೆ ಅಂಟು ಬೆರೆಸಿ ಬಿಳಿ ಬಣ್ಣ ತಯಾರಿಸುವುದು. ನಂತರ ಬಿಳಿಮಣ್ಣು ಕಪ್ಪೆಚಿಪ್ಪುಗಳನ್ನು ಕುಟ್ಟಿ ಪುಡಿಮಾಡಿ ಅದಕ್ಕೆ ಅಭ್ರಕವನ್ನು ಮಿಶ್ರಣ ಮಾಡಿ ಬಿಳಿಬಣ್ಣವನ್ನು ತಯಾರಿಸುತ್ತಿದ್ದಾರೆ.

ಈ ಮೇಲಿನ ಆರು ಬಣ್ಣಗಳಿಂದ ತಮಗೆ ಬೇಕಾದಂತಹ ಬಣ್ಣವನ್ನು ಮಿಶ್ರಣ ಮಾಡಿಕೊಂಡು ತಯಾರಿಸಿಕೊಳ್ಳುತ್ತಿದ್ದರು.

**ಗಂಜೀಫಾ ದಶಾವತಾರದ ಚಿತ್ರಗಳು**

**ಮತ್ಸ್ಯಾವತಾರ ಚಿತ್ರ-೧**

ಒಂದನೆಯ ಗಂಜೀಫಾ ಚಿತ್ರವು ಮತ್ಸ್ಯಾವತಾರವನ್ನು ತೋರಿಸುತ್ತದೆ. ಮಧ್ಯ ಬಿಂದುವಿನಲ್ಲಿ ಮೀನಿನಿಂದ ಕೂಡಿದ್ದು, ಒಂದು ವೃತ್ತಾಕಾರದ ಚಕ್ರಗಳಿಂದ ಕೂಡಿದೆ. ಮುಂದಿನ ಕೈವರದ ಹಸ್ತವಾಗಿದೆ. ನೀರಿನ ಹಾಗೆ ಇರುವ ಮೀನುಗಳನ್ನು ಚಿತ್ರಿಸಲು ತಿಳಿನೀಲಿ ಬಣ್ಣವನ್ನು ಇಲ್ಲಿ ಬಳಸಿಕೊಂಡು ಚಿತ್ರ ರಚನೆ ಮಾಡಲಾಗಿದೆ.

**ಕೂರ್ಮಾವತಾರ ಚಿತ್ರ-೨**

ಎರಡನೆಯದಾಗಿ ಕೂರ್ಮಾವತಾರದ ಚಿತ್ರ, ಇದೂ ಕೂಡಾ ಮೇಲಿನಂತೆ ದೇಹ ಕೆಳಭಾಗವು ಆಮೆಯ ದೇಹವನ್ನು ಹೊಂದಿದ್ದು, ಈ ಚಿತ್ರದಲ್ಲಿ ನಾಲ್ಕು ಕೈಗಳಲ್ಲಿ ಶಂಖ ಚಕ್ರಧಾರಿಯಾಗಿದ್ದಾನೆ. ವರಹಾ ಮುಖದಲ್ಲಿ ಕೋರೆ ಹಲ್ಲಿನಿಂದ ಪೃಥ್ವಿಯನ್ನು ಹಿಡಿದಿರುವ ದೃಶ್ಯ ಕಂಡುಬರುತ್ತದೆ. ಈ ಚಿತ್ರದಲ್ಲಿ ಸಹ ಕೈಗಳಲ್ಲಿ ವರಹಸ್ತಗಳಿಂದ ಕೂಡಿದೆ. ತಿಳಿಗುಲಾಬಿ ಬಣ್ಣದಿಂದ ರಚಿಸಿರುವುದು ಕಂಡುಬರುತ್ತದೆ.

**ವರಹಾವತಾರ ಚಿತ್ರ-೩**

ಮೂರನೆಯ ಅವತಾರವಾಗಿರುವ ವರಹಾವತಾರ ಗಂಜೀಫಾ ಚಿತ್ರವಾಗಿದೆ. ವಿಷ್ಣುವು ವರಾಹದ ಮುಖವನ್ನು ಹೊಂದಿದೆ. ಇದರಲ್ಲಿ ಕುದುರೆಮುಖವು ಸಹ ಕಂಡುಬರುತ್ತದೆ. ಇಲ್ಲಿ ತಿಳಿಗುಲಾಬಿ ಬಣ್ಣದಿಂದ ಚಿತ್ರರಚನೆ ಮಾಡಿರುವುದು, ಕೈಗಳಲ್ಲಿ ಶಂಕಚಕ್ರಧಾರಿಯಾಗಿದ್ದಾನೆ.

ವರಹ ಮುಖದಲ್ಲಿ ಕಿರೀಟ ಧರಿಸಿರುವ ದೃಶ್ಯವು ಇಲ್ಲಿ ಕಾಣಬಹುದಾಗಿದೆ. ವರಹಾವತಾರವು ಸಿಂಹಾಸನದ ಮೇಲೆ ಕುಳಿತಿರುವುದು ಕಂಡುಬರುತ್ತದೆ.

**ನರಸಿಂಹಾವತಾರ ಚಿತ್ರ-೪**

ನಾಲ್ಕನೆಯ ಚಿತ್ರ ಉಗ್ರನರಸಿಂಹನ ಅವತಾರವಾಗಿದೆ. ಈ ಅವತಾರದಲ್ಲಿ ವಿಷ್ಣುವು ಸಿಂಹದ ಮುಖವನ್ನು ಹೊಂದಿದ್ದು, ಉಗ್ರರೂಪ ತಾಳಿದ ವಿಷ್ಣುವಿನ ಕೈಗಳಲ್ಲಿ ಶಂಖ, ಚಕ್ರಧಾರಿಯಾಗಿದ್ದಾನೆ. ಮುಂದಿನ ಎರಡು ಕೈಗಳಲ್ಲಿ ಒಂದು ಅಭಯ ಹಸ್ತ, ಒಂದು ವರಹ ಹಸ್ತದಿಂದ ಕೂಡಿದೆ. ಘರ್ಜನೆಯಿಂದ ಕೂಡಿದ ಕಣ್ಣುಗಳು ವಿಶಾಲವಾಗಿ ಚಿತ್ರ ರಚಿಸಲಾಗಿದೆ.

**ವಾಮನವತಾರ ಚಿತ್ರ-೫**

ಈ ಅವತಾರವು ಬಲಿಚಕ್ರವರ್ತಿಯ ಗರ್ವವನ್ನು ಹರಣ ಮಾಡುವ ಸಲುವಾಗಿ ಮಹಾವಿಷ್ಣುವು ಒಬ್ಬ ಬ್ರಾಹ್ಮಣ ಬಾಲಕನ ರೂಪದಲ್ಲಿ ಬಂದು ಬಲಿ ಚಕ್ರವರ್ತಿಗೆ ದಾನವನ್ನು ಕೇಳುತ್ತಾನೆ. ಕೇವಲ ಮೂರು ಪಾದ ಜಾಗವನ್ನು ಭಿಕ್ಷೆ ನೀಡು ಎಂದು ಕೇಳಿ ಒಂದು ಪಾದವನ್ನು ಭೂಮಿಗೆ ಇನ್ನೊಂದು ಪಾದವನ್ನು ಆಕಾಶಕ್ಕೆ ಇಡುತ್ತಾನೆ. ಈ ಚಿತ್ರದಲ್ಲಿ ಮುಖವು ಮುಗ್ಧ ಬಾಲಕನಂತಿದ್ದು ಒಂದು ಕೈಯಲ್ಲಿ ಕಮಂಡಲವನ್ನು ಹಿಡಿದಿದ್ದಾನೆ. ಇನ್ನೊಂದು ಕೈಯಲ್ಲಿ ಛತ್ರಿಯನ್ನು ಹಿಡಿದುಕೊಂಡಿದ್ದಾನೆ.

**ಪರುಶುರಾಮನ ಅವತಾರ ಚಿತ್ರ-೬**

ಜಮದಗ್ನಿ ಮತ್ತು ರೇಣುಕಾ ದೇವಿಯ ಮಗನಾಗಿ ಜನಿಸಿ ತಂದೆಯ ಆಜ್ಞೆಯಂತೆ ತಾಯಿಯ ಶಿರವನ್ನು ಕಡಿದು ತಂದೆಯ ವರಪ್ರಸಾದದಿಂದ ಮತ್ತೆ ತಾಯಿಯನ್ನು ಮರಳಿ ಪಡೆದಿರುವ ಈ ಪರಶುರಾಮನ ಅವತಾರದ ಮುಂದೆ ಕಾರ್ತಿಕ ವೀರಾರ್ಜುನನ್ನು ಸಂಹರಿಸಿದ ಸಂದರ್ಭ ಅತ್ಯಂತ ಉಗ್ರವಾಗಿದೆ. ಬಲಗೈಯಲ್ಲಿ ಪರುಶವನ್ನು ಹಿಡಿದು ಎಡಗೈಯನ್ನು ಸೊಂಟದ ಮೇಲೆ ಇರಿಸಿ ನಿಂತ ಭಂಗಿ ಅತ್ಯಂತ ಗಂಭೀರವಾಗಿದೆ.

**ರಾಮ ಅವತಾರ ಚಿತ್ರ-೭**

ರಾಮನು ಎಡಗೈಯಲ್ಲಿ ಬಿಲ್ಲನ್ನು ಹಿಡಿದು ಬಲಗೈ ವರದ ಹಸ್ತವನ್ನು ಹೊಂದಿದ್ದಾನೆ. ಬೆನ್ನಿಗೆ ಬಾಣ ಬತ್ತಳಿಕೆಯನ್ನು ಧರಿಸಿದ್ದಾನೆ.

**ಕೃಷ್ಣಾವತಾರ ಚಿತ್ರ-೮**

ಈ ಅವತಾರದ ಚಿತ್ರದಲ್ಲಿ ಕೃಷ್ಣನ ಬಲಗೈ ವರದ ಹಸ್ತವಾಗಿದೆ. ಎಡಗೈಯನ್ನು ಸೊಂಟದ ಮೇಲೆ ಇರಿಸಿಕೊಂಡ ಭಂಗಿಯಲ್ಲಿದೆ. ಶ್ರೀ ಕೃಷ್ಣನು ಈ ಅವತಾರದಲ್ಲಿ ಅಧರ್ಮಿಗಳಾದ

ಕೌರವರನ್ನು ಪಾಂಡವರಿಂದ ನಾಶಪಡಿಸಿ ಧರ್ಮಕರ್ತರಾದ ಪಾಂಡವರಿಗೆ ರಾಜ್ಯವನ್ನು ದೊರಕಿಸಿ ಕೊಟ್ಟು ಅರ್ಜುನನಿಗೆ ಭಗವದ್ಗೀತೆಯನ್ನು ಭೋಧನೆ ಮಾಡಿದ ಅವತಾರವಾಗಿದೆ.

**ಭೌದ್ಧಾವತಾರ ಚಿತ್ರ-೯**

ಮಹಾವಿಷ್ಣು ಈ ಅವತಾರದಲ್ಲಿ ಜ್ಞಾನ ಮುದ್ರೆಯ ಕೈಯನ್ನು ಹೊಂದಿದ್ದು ಇನ್ನೊಂದು ಕೈ ಯೋಗ ಮುದ್ರೆಯಲ್ಲಿದೆ. ತಲೆಯ ಮೇಲೆ ಗುಂಗುರು ಕೂದಲು ಕಾಣಬಹುದು.

**ಕಲ್ಕಿ ಅವತಾರ ಚಿತ್ರ-೧೦**

ಕುದುರೆಯ ಮುಖವುಳ್ಳದ್ದಾಗಿದೆ. ಖಡ್ಗ ಗುರಾಣಿಯನ್ನು ಎರಡೂ ಕೈಯಲ್ಲಿ ಹಿಡಿದುಕೊಂಡು ನಿಂತಿರುವ ಭಂಗಿಯಲ್ಲಿದೆ. ಈ ಎಲ್ಲ ಅವತಾರಗಳಲ್ಲಿ ವಿಷ್ಣು ಕಿವಿಯಲ್ಲಿ ಕರ್ಣಕುಂಡಲವನ್ನು ಧರಿಸಿದ್ದಾನೆ. ಮತ್ತು ಹಣೆಯ ಮೇಲೆ ನಾಮವನ್ನು ಕಾಣಬಹುದು. ಈ ಎಲ್ಲ ಅವತಾರಗಳ ಚಿತ್ರಗಳು ಒಂದೇ ಎತ್ತರದ ಗಾತ್ರದಲ್ಲಿ ಮೂಡಿಬಂದಿವೆ.

ಕರ್ನಾಟಕದಲ್ಲಿ ಗಂಜೀಫಾ ಅಷ್ಟಾಗಿ ಹೋಗಿತ್ತು ಒಬ್ಬನೇ ಒಬ್ಬ ಕಲಾವಿದನೂ ಇರಲಿಲ್ಲ, ಹಳೆಯ ಮೈಸೂರು ಕಡೆಗಳಲ್ಲಿ ಇದ್ದಂಥ ಗಂಜೀಫಾಗಳನ್ನು ನಮ್ಮವರು ವಿದೇಶಿಯರಿಗೆ ಮಾರುತ್ತಿದ್ದರು. ಅಮೂಲ್ಯವಾದ ನಮ್ಮ ಕಲಾನಿಧಿಯನ್ನು ನಾವೇ ಹೀಗೆ ಮಾರಿಕೊಂಡು ಬಂದಿದ್ದು ಅದರ ಬಗ್ಗೆ ನಮಗಿರುವ ಪ್ರೀತಿ ಆಧಾರಗಳು ಎಷ್ಟು ಎಂದು ಹೇಳುತ್ತದೆ. ಈ ಹಿನ್ನೆಲೆಯಲ್ಲಿ ದೈನಾನುಗ್ರಹದ ಪ್ರತಿಭೆ ಮತ್ತು ಸ್ವಂತ ಪರಿಶ್ರಮದಿಂದ ಕೇವಲ ಹಳೆಯ ಗಂಜೀಫಾಗಳನ್ನು ನೋಡಿ ಅನುಭವಿಸಿ, ಈ ಕಲೆಯನ್ನು ಮಾಡಿಕೊಂಡವರು ರಘುಪತಿ ಭಟ್ಟರು. ಈಗ ಅವರು ಗಂಜೀಫಾ ರಘುಪತಿ ಭಟ್ಟರೆಂದೇ ಖ್ಯಾತರು. ಅವರು ಹುಟ್ಟಿದ್ದು ೧೯೫೭ ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳ ತಾಲೂಕಿನ ಬೆಳ್ಮಣ್ಣು. ಇವರ ತಂದೆ ಉಡುಪಿ ಅಡುಗೆಯವರು ಅನಂತರಾಮ ಭಟ್. ತಾಯಿ ಕೃಷ್ಣವೇಣಿ. ನಾಲ್ಕು ಗಂಡು ಮೂರು ಹೆಣ್ಣು ಮಕ್ಕಳಲ್ಲಿ ರಘುಪತಿ ಆರನೆಯವರು. ರಘುಪತಿ ಭಟ್ಟರು ಹೆಣ್ಣು ಮಕ್ಕಳಲ್ಲಿ ನಾಗಮಂಗಲದಲ್ಲಿನ ಸೌಮ್ಯಕೇಶವ ದೇವಸ್ಥಾನ. ಊರಿನ ಕೆರೆ ಇವರಿಗೆ ಸ್ಫೂರ್ತಿ ಕೊಟ್ಟ ಕೇಂದ್ರಗಳು. ಬಹುಶಃ ಅಲ್ಲಿಯ ಪಂಚಲೋಹ ಮೂರ್ತಿಯ ಕೈ ಕೆಲಸವೂ ಅವರಿಗೆ ಪ್ರಚೋದನೆಯನ್ನು ಕೊಟ್ಟಿರಬೇಕು.

ಆ ಮೇಲೆ ಮೈಸೂರು ಸಾಂಪ್ರದಾಯಿಕ ಶೈಲಿಯಲ್ಲಿ ಚಿತ್ರಗಳನ್ನು ಬರೆಯಲಾರಂಭಿಸಿದರು. ಕೆಲವು ತಿಂಗಳು ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ನಂಜುಂಡರಾಯರಲ್ಲೂ ತರಬೇತಿ ಪಡೆದರು. ಮೈಸೂರಿನಲ್ಲಿ ಹಳೆಯ ಗಂಜೀಫಾ ಎಲೆಗಳನ್ನು ಒಮ್ಮೆ ಆಕಸ್ಮಿಕವಾಗಿ ಕಂಡಾಕ್ಷಣ ಇಂಥವನ್ನು ಬರೆಯಬೇಕು ಎಂದು ಸಂಕಲ್ಪ ಮಾಡಿದರು. ಸಾಧನೆ ಆರಂಭಿಸಿದರು. ಶ್ರೀ ರಾಮ ರಘುಪತಿಯವರ ಇಷ್ಟದೈವ, ಅವರ ಅತ್ಯಂತ ಉತ್ತಮ ಎಲೆಗಳು ರಾಮಾಯಣ

ಚಿತ್ರಗಳಿಂದ ಕೂಡಿವೆ, ಅವರ ಇತರ ಪ್ರಮುಖ ಗಂಜೀಫಾ ಎಲೆಗಳು ವಿಶ್ವರೂಪ, ಶ್ರೀರಂಗ, ಗಣಪತಿ, ನವನಾರೀಕುಂಜರ, ಸಪ್ತನಾರೀ ತುರಗ, ವಿಶ್ವಾಮಿತ್ರ, ವಸಿಷ್ಠರು, ಕಾಮಧೇನುವಿಗಾಗಿ, ಹೋರಾಟ ಮಾಡುವುದು, ಬಾಲಕೃಷ್ಣ, ದಶಾವತಾರ, ನವಗ್ರಹ, ಅಷ್ಟದಿಕ್ಪಾಲಕರು, ಕಾಮಸೂತ್ರದ ಮಿಥುನಗಳು ಇನ್ನೂ ಮುಂತಾದ ಚಿತ್ರಗಳನ್ನು ಬಿಡಿಸುತ್ತಿದ್ದರು. ರಘುಪತಿ ಭಟ್ಟರು ಕಂಡುಕೊಂಡ ವರ್ಣಗಳನ್ನು ಉಪಯೋಗಿಸುವುದಿಲ್ಲ. ಭಾರತೀಯ ಹಿನ್ನಲೆಯಲ್ಲಿ ಅವುಗಳನ್ನು ಬೇಗನೆ ಮುಟ್ಟುತ್ತವೆ. ಎರಡು ಬಾರಿ ವಿದೇಶಗಳು ಆರ್ಟ್ ಗ್ಯಾಲರಿ ಮತ್ತು ಮ್ಯೂಸಿಯಂಗಳನ್ನು ನೋಡಿ ಬಂದ ಬಳಿಕ ಅವರ ಕಲೆಯಲ್ಲಿ ಹೊಸ ಸಂಚಾರವಾಗಿದೆ. ಆದರೆ ಅವರ ಮೂಲ ಜಾನಪದ ಸತ್ವ ಭಾರತೀಯ ಹೊಳಿಹು ಮತ್ತಷ್ಟು ಗಟ್ಟಿಯಾಗಿದೆ. ರಂಗೋಲಿ, ಹಚ್ಚೆ, ಗಿಡ, ಮರ, ಬಳ್ಳಿ, ಮೃಗ, ಪಕ್ಷಿ, ಹಾವು ಇವೆಲ್ಲವುಗಳಲ್ಲಿ "ರಘುಪತಿ ಕೈವಾಡ ಈಗ ಸ್ಪಷ್ಟ, ಅದೇ ಅವರ ಕಲಾಸಿದ್ಧಿ ಎಂದು ತಿಳಿಯಬಹುದಾಗಿದೆ.

ರಘುಪತಿಯವರು ಗಂಜೀಫಾ ಕಲೆಯನ್ನು ಮೊಟ್ಟ ಮೊದಲಿಗೆ ಗುರುತಿಸಿದವರು ಧರ್ಮಸ್ಥಳದ ವೀರೇಂದ್ರ ಹೆಗ್ಗಡೆಯವರು, "ತರಂಗ" ಪತ್ರಿಕೆ ಈ ಕಲೆಯನ್ನು ಪುನರುಜ್ಜೀವಿಗೊಳಿಸಲು ಸತತ ಪ್ರೋತ್ಸಾಹ ಕೊಟ್ಟಿತು. ಆಗ "ಆಕ್ಸ್‌ಫರ್ಡ್‌ನ" "ಆರ್ಟ್ ಇನ್ ಆಕ್ಷನ್, ೧೯೯೪ ರಲ್ಲಿ ಪ್ರದರ್ಶನದಲ್ಲಿ ರಘುಪತಿಯವರ ಗಂಜೀಫಾಗಳ ಜಾಗತಿಕ ಗಮನ ಸೆಳೆದವು. ಈ ಅಂತಾರಾಷ್ಟ್ರೀಯ ಕಲಾಮೇಳದಲ್ಲಿ ಕಲಾವಿದರು. ತಮ್ಮ ಕಲೆಯನ್ನು ಸ್ವತಃ ಮಾಡುವ ಬಗೆಯನ್ನು ವಿವರಿಸಬೇಕು. ಮಾಡಿ ತೋರಿಸಬೇಕು. ದುಂಡಗಾದ ಗಂಜೀಫಾ ಎಲೆಗಳ ಈ ವಿಶಿಷ್ಟ ಕಲೆಯನ್ನು ಕಂಡು ಸಾಮಾನ್ಯ ಜನರು, ಕಲಾವಿದರು, ವಿಮರ್ಶಕರು ಕಾರ್ಯಕರ್ತರು ಮಂತ್ರ ಮುಗ್ಧರಾದರು. ಭಾರತೀಯ ಕಲೆಯ ಬಗ್ಗೆ ಅವರ ಗೌರವ ಹೆಚ್ಚಿತು. ಕುತೂಹಲವೂ ಹೆಚ್ಚಿತು. ಕಮಲಾದೇವಿ ಚಟ್ಟೋಪಾಧ್ಯಾಯ ಅವರ ಹೆಸರಿನಲ್ಲಿರುವ ವಿಶ್ವಕರ್ಮ ಪ್ರಶಸ್ತಿಯನ್ನು ೧೯೯೦ ರಲ್ಲಿ ರಘುಪತಿಯವರಿಗೆ ಕೊಡಲಾಯಿತು. ಅವರ ಕನಸು ಆದ ಗಂಜೀಫಾ ಆರ್ಟ್ ಗ್ಯಾಲರಿ. ಶ್ರೀರಂಗಪಟ್ಟಣದಲ್ಲಿ, ಶ್ರೀರಂಗನ ದೇವಸ್ಥಾನದ ಮುಂಭಾಗದಲ್ಲಿರುವ ಮುಮ್ಮಡಿ ಕೃಷ್ಣರಾಜ ಒಡೆಯರ ಹುಟ್ಟಿದ ಸ್ಥಳದಲ್ಲಿ ಕಟ್ಟಿರುವ ಸ್ಮಾರಕ ಕಟ್ಟಡದಲ್ಲಿ ರೂಪುಗೊಂಡಿವೆ.

ಅಲ್ಲಿ ಹಿರಿಯ ಅಧಿಕಾರಿಗಳು ಚಿರಂಜೀವ ಸಿಂಘ ಮತ್ತು ಕರ್ನಾಟಕದ ಆರ್ಕಿಯಾಲಜಿ ವಿಭಾಗದ ನಿರ್ದೇಶಕ ಡಾ॥ ದೇವರಾಜ್ ಇದಕ್ಕೆ ತುಂಬಾ ಸಹಾಯ ಮಾಡಿದ್ದಾರೆ. ಲಲಿತಕಲಾ ಅಕಾಡೆಮಿಯೂ ಪಿ. ಆರ್. ತಿಪ್ಪೇಸ್ವಾಮಿಯರವರು ನೇತೃತ್ವದಲ್ಲಿ ಮಾರ್ಗದರ್ಶನ ಮಾಡಿದೆ, ಕಲಾವಿದ ರಘುಪತಿಯ ಬೆಳವಣಿಗೆಗೆ ಪೋಷಣೆ ಕೊಟ್ಟರು. ಶ್ರೀ ರಂಗಪಟ್ಟಣದ ನಗರ ಸಭೆಯವರು ಕೂಡ ಭಾರತದ ಏಕಮಾತ್ರ ಗಂಜೀಫಾ ಕಲಾಶಾಲೆ ನಮ್ಮಲ್ಲಿರಬೇಕು ಎಂಬ ಅಭಿಮಾನದಿಂದ ಅವನ್ನು ನಡೆಸಿಕೊಡ ಹೋಗಿರುವುದು ಇಲ್ಲಿ ಕಾಣಬಹುದಾಗಿದೆ.

## ಅಧ್ಯಾಯ ೬

# ಕಾಗದದ ಮಾಧ್ಯಮದ ದಶಾವತಾರದ ಚಿತ್ರಗಳು

ಐತಿಹಾಸಿಕವಾಗಿ ಭಾರತದಲ್ಲಿ ಚಿತ್ರಕಲೆಯಲ್ಲಿ ಬೆಳವಣಿಗೆಯನ್ನು ಗಮನಿಸಿದರೆ ಅವುಗಳಲ್ಲಿನ ವಿವಿಧ ಹಂತಗಳು ನಮಗೆ ಸ್ಪಷ್ಟವಾಗಿ ಗೋಚರಿಸುತ್ತವೆ. ಪ್ರಾಚೀನ ಮಾನವನ ಗುಹಾಂತರ ಚಿತ್ರಗಳಿಂದ ಹಿಡಿದು ಅಜಂತಾ, ಭಾಗದಲ್ಲಿಯ ಭೌದ್ಧ ಧರ್ಮದ ಚಿತ್ರಗಳು, ಬಾದಾಮಿ, ಎಲ್ಲೋರಾಗಳಲ್ಲಿನ ವೈದಿಕ ಸಾಂಪ್ರದಾಯದ ಭಿತ್ತಿ ಚಿತ್ರಗಳು, ದಕ್ಷಿಣದ ತಂಜಾವೂರು, ಸಿತ್ತನವಾಸಲ್ ಇತ್ಯಾದಿ ಸ್ಥಳಗಳ ಭಿತ್ತಿ ಚಿತ್ರಗಳಲ್ಲಿಯ ಆಕೃತಿಗಳೆಲ್ಲವೂ ರೇಖಾ ಪ್ರಧಾನವಾದವುಗಳು. ಇನ್ನೂ ನಂತರದ ಕಾಲದಲ್ಲಿಯ ಮೊಘಲ್, ರಾಜಸ್ಥಾನಿ, ಪಹಾಡಿ ಚಿತ್ರಗಳು ಮತ್ತು ವೈಷ್ಣವ ತಾಳೆಗರಿ ಹಸ್ತಪ್ರತಿಗಳಲ್ಲಿನ ಚಿತ್ರಗಳು ಹಾಗೂ ವಿಜಯನಗರ ಕಾಲದ ಹಂಪಿ, ಲೇಪಾಕ್ಷಿ ಮತ್ತು ತಾಡಪತ್ರಿಗಳಲ್ಲಿನ ಭಿತ್ತಿಚಿತ್ರಗಳೆಲ್ಲವೂ ರೇಖಾ ಪ್ರಧಾನವಾದ ಚಿತ್ರಗಳೆ. ಈ ಮೇಲೆ ಹೆಸರಿಸಿದ ಉದಾಹರಣೆಗಳಲ್ಲಿ ಆಕೃತಿಗಳ ಬಾಹ್ಯರೇಖೆಗಾಗಿ ಅವುಗಳಲ್ಲಿನ ವಿವಿಧ ಅಂಶಗಳನ್ನು ತೋರಿಸುವ ಸಾಧನೆಗಳಾಗಿ ರೇಖೆಗಳೇ ಆಕೃತಿಗಳ ನಿರ್ದಿಷ್ಟ ರೂಪರೇಷೆಗಳನ್ನು ನಿರ್ದೇಶಿಸುತ್ತದೆ.

ರೇಖೆಗಳು ಚಿತ್ರಕಲೆಯ ತಾಯಿಬೇರು ಇದ್ದಂತೆ, ರೇಖೆಗಳಿಲ್ಲದೇ ಯಾವುದೇ ಚಿತ್ರಗಳು ಪೂರ್ಣಗೊಳ್ಳುವುದಿಲ್ಲ ಕಿನ್ನಾಳ ಚಿತ್ರಲಾವಿದರಲ್ಲಿ ಹಿಂದಿನಿಂದಲೂ ಉಳಿದುಕೊಂಡು ಬಂದಿರುವ ಅಭ್ಯಾಸ ಪುಸ್ತಕದಿಂದ ರೇಖಾ ಚಿತ್ರಗಳನ್ನು ಆಯ್ದುಕೊಳ್ಳಲಾಗಿದೆ. ಕಿನ್ನಾಳದ ಕಲಾವಿದರಲ್ಲಿ ಇರುವ ಪ್ರಸ್ತುತ ರೇಖಾ ಚಿತ್ರಗಳು ಕೆಲವು ತಲೆಮಾರಿನಿಂದ ಉಳಿದುಕೊಂಡು ಬಂದಿವೆ.[೧] ಈ ರೇಖಾಚಿತ್ರಗಳನ್ನು ನಾವು ಗಮನವಿಟ್ಟು ನೋಡಿದಾಗ ಅವುಗಳು ಕೇವಲ ಆಕೃತಿಗಳನ್ನು

೧. ರವಿ ವಸಂತರಾವ್ ನಾಯಕ, ಕಿನ್ನಾಳ ಕಲೆ, ಪುಟ.೭೫

ರೂಪಿಸುವ ರೇಖೆಗಳೇ ಪ್ರಬುದ್ಧವಾದ ಮತ್ತು ತಾಂತ್ರಿಕವಾಗಿ ಉನ್ನತಿಹೊಂದಿದ ಚಿತ್ರಶೈಲಿಯ ಗುರುತಿಸಬಹುದು. ರೇಖೆಗಳ ವಿನ್ಯಾಸ, ಅವುಗಳಲ್ಲಿನ ಸ್ಪಷ್ಟವಾದ ಮತ್ತು ನೇರವಾದ ಅಭಿವ್ಯಕ್ತ ರೂಪ, ನುರಿತ ಕಲಾವಿದನ ಕೈಯಿಂದ ಮೂಡಿ ಬಂದಿದೆ. ಆಕೃತಿಗಳನ್ನು ರಚಿಸುವಾಗ ಬೇರೆ ಬೇರೆ ಆಕೃತಿಗಳಲ್ಲಿನ ಆಂತರಿಕ ಸಂಬಂಧ ತಾಂತ್ರಿಕವಾಗಿ ಕಲಾವಿದ ಅವುಗಳನ್ನು ಸಂಯೋಜಿಸಿರುವ ರೀತಿ ಅತ್ಯಂತ ಸ್ಪಷ್ಟವಾಗಿ ಮೂಡಿ ಬಂದಿದೆ. ವಿಜಯನಗರ ಕಾಲದ ಕಲೆಯ ಅತ್ಯುತ್ತಮ ಮತ್ತು ಪ್ರೌಢವಾದ ಶೈಲಿಯನ್ನು ಕಿನ್ನಾಳದ ರೇಖಾಚಿತ್ರಗಳು ವೈವಿಧ್ಯಮಯವಾದ ವಿಷಯ ವ್ಯಾಪ್ತಿಯನ್ನು ಹೊಂದಿವೆ. ದಶಾವತಾರ, ರಾಮಾಯಣ, ಮಹಾಭಾರತ, ರಾಜ-ರಾಣಿಯರ ಚಿತ್ರಗಳು ದೈನಂದಿನ ಬದುಕಿನ ವಿವಿಧ ಮಜಲುಗಳನ್ನು ಬಿಂಬಿಸುವ ಚಿತ್ರಗಳು, ಹಾಗೂ ಕಾಮ ರತಿಯರ ಮತ್ತು ಬಿಡಿ ಬಿಡಿಯಾಗಿ ಇನ್ನಿತರ ದೇವ ದೇವತಿಯರ ಚಿತ್ರಗಳು ರೇಖಾ ಕೃತಿಯಲ್ಲಿ ಮೂಡಿ ಬಂದಿವೆ. ಈ ಮೇಲಿನ ಚಿತ್ರಗಳು ಒಂದು ಭಾಗವಾದರೆ, ದೇವಾಲಯಗಳ ಗೋಡೆಗಳ, ಗರ್ಭಗೃಹದ ಬಾಗಿಲುಗಳು ಮತ್ತು ಉತ್ಸವ ಮೂರ್ತಿಗಳನ್ನು ಇರುವ ಪಲ್ಲಕ್ಕಿ, ಕಿನ್ನಾಳ ಕಲೆಯ ಚೌಕಿಯ ಗೋಡೆ ಫಲಕಗಳ ಹಲಗೆಗಳ ಮೇಲೆ ಅಲಂಕರಣಗಳಾಗಿ ಚಿತ್ರಣವಾಗಿವೆ. ಮೊದಲನೆಯ ಚಿತ್ರಗಳು ಚಿಕಣಿ ಚಿತ್ರಗಳ ಹಾಗೆ ಶಿಷ್ಟ ಶೈಲಿಯನ್ನು ಹೊಂದಿವೆ. ಈ ಚಿತ್ರಗಳೆಲ್ಲವು ವಿಭಿನ್ನ ವಿಷಯ ಮತ್ತು ಆಕಾಲದ ಶೈಲಿಗಳನ್ನು ರಚನೆಯಾಗಿ ಬೆಳದಿವೆ. ಅವರ ಈಗಿನ ಕಲಾಕೃತಿಗಳನ್ನು ಮತ್ತು ಅವರಲ್ಲಿ ಸಂಗ್ರಹವಾಗಿರುವ ಕೆಲವೇ ಕೆಲವು ಕಲಾಕೃತಿಗಳನ್ನು ಗಮನಿಸಿದಾಗ ಮತ್ತು ಪ್ರಸ್ತುತವಾಗಿ ವಿಶ್ಲೇಷಣೆ ಮಾಡುತ್ತಿರುವ ರೇಖಾ ಚಿತ್ರಗಳನ್ನು ಅವುಗಳ ಶೈಲಿಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಿಜಯನಗರ ಕಾಲದ ಕಲಾತ್ಮಕ ಅಂಶಗಳನ್ನು ಸ್ಪಷ್ಟವಾಗಿ ಮೈಗೂಡಿಸಿಕೊಂಡು ಬಂದಿರುವುದು ಕಂಡುಬರುತ್ತದೆ.

ರೇಖಾಚಿತ್ರಗಳನ್ನು ಅಭ್ಯಸಿಸುವ ಮೊದಲು ಪ್ರಸ್ತುತ ಚಿತ್ರಗಳ ಕಲಾವಿದರ ಕುರಿತು ಒಂದು ವಿಷಯವನ್ನು ಸ್ಪಷ್ಟವಾಗಿ ಹೇಳಬೇಕಾಗುತ್ತದೆ. ಈ ಚಿತ್ರಗಳನ್ನು ರಚಿಸಿದ ಕಲಾವಿದರು ಹೆಸರು ಎಲ್ಲೂ ದಾಖಲಾಗಿಲ್ಲ. ಆದರೆ ಒಂದಂತು ನಿಜ ಈ ಕಲಾಕೃತಿಗಳು ಮೂಲದಲ್ಲೇ ರಚಿತವಾದವು. ಈ ಪುಸ್ತಕ ಅವರ ಪೂರ್ವಜರಿಂದ ತಮಗೆ ದೊರೆಕಿತೆಂದು ತಿಳಿಸುತ್ತಾರೆ. ಶ್ರೀ ನಾರಾಯಣಪ್ಪ ಚಿತ್ರಗಾರ ಪ್ರತಿಯೊಂದು ರೇಖಾ ಚಿತ್ರಗಳ ಗುಣಮಟ್ಟ ರೇಖಾ ವಿನ್ಯಾಸದ ಶೈಲಿಯನ್ನು ಗಮನಿಸದಾಗ ಇವು ವಿಜಯನಗರದ ಪತನದ ನಂತರದಲ್ಲಿ ರಚಿತವಾದವು ಎಂದೂ ಸ್ಪಷ್ಟವಾಗಿ ಹೇಳಬಹುದು.[೨] ರೇಖಾ ಚಿತ್ರಗಳು ಚಿಕಣಿ ಚಿತ್ರಗಳ ಮಾದರಿಯಲ್ಲಿದೆ. ನೀಜವಾದ ಸ್ಪಷ್ಟವಾದ ಮತ್ತು ತೀಕ್ಷ್ಣವಾದ ರೇಖೆಗಳು ಆಕೃತಿಗಳನ್ನು ರಚಿಸುತ್ತವೆ. ನಯವಾದ

---

೨. ಡಾ. ಅ.ಲ.ನರಸಿಂಹನ್, ಶ್ರೀ ತಿಪ್ಪಜ್ಜನವರ ರೇಖಾಚಿತ್ರಗಳು, ಪುಟ.೧೦

ಮತ್ತು ಸೂಕ್ಷ್ಮವಾದ ರೇಖೆಗಳನ್ನು ವಿವಿಧ ಭಂಗಿಗಳನ್ನು, ರೂಪಗಳನ್ನು ಮತ್ತು ಅಂಗಗಳ ಭಾಗಗಳನ್ನು ಸಮರವಾಗಿ ನಿರ್ದೇಶಿಸುತ್ತವೆ. ರೇಖಾ ಚಿತ್ರಗಳು ಸೂಕ್ಷ್ಮವಾದ ಕುಂಚದಿಂದ ಅಥವಾ ಚೂಪಾದ ಲೇಖನಿಯಿಂದ ರಚಿಸಲಾಗಿದೆ.[೩]

ಆಕೃತಿಗಳು ರೇಖಾಕೃತಿಗಳಾಗಿದ್ದರೂ ರೇಖೆಗಳ ಪರಿಪೂರ್ಣತೆ ಅವುಗಳಲ್ಲಿ ಘನತ್ವವನ್ನು ಮತ್ತು ಚಲನ ಶಕ್ತಿಯನ್ನು ತುಂಬುತ್ತದೆ. ಆಕೃತಿಗಳ ನೇರವಾದ ಸಂಯೋಜನೆ ಹಾವ-ಭಾವಗಳ್ನನು ತುಂಬಿ, ಒಂದಕ್ಕೊಂದು ಸಂಭಾಷಿಸುವಂತಿವೆ. ಸಂಯೋಜನೆಯಲ್ಲಿ ಕಂಡುಬರುವ ಚಲನೆಯ ಸ್ಥಿರವನ್ನು ಗುರುತಿಸುವ ಮತ್ತು ನಿಯಂತ್ರಿಸುವ ಶಕ್ತಿ ಮತ್ತೊಂದು ಆಕೃತಿಯೊಂದಿಗಿನ ಸಂಬಂಧಗಳಲ್ಲಿ ಆಂತರಿಕ ಮತ್ತು ಬಾಹ್ಯವಾದ ನೇರ ಹೊಂದಾಣಿಕೆ ಕಂಡುಬರುತ್ತದೆ.

**ಕಲಾಕೃತಿಗಳ ಕುರಿತ ಚರ್ಚೆ**

**ಚಿತ್ರ-೧ : ವಿಷ್ಣುವಿನ ದಶಾವತಾರದ ರೇಖಾಚಿತ್ರ**

ಈ ರೇಖಾಚಿತ್ರದಲ್ಲಿ ಒಂದಾದ ನಂತರ ಒಂದರಂತೆ ವಿಷ್ಣುವಿನ ಬೇರೆ ಬೇರೆ ಅವತಾರಗಳ ಸಾಲು ರೇಖಾಚಿತ್ರಗಳು ಒಂದೇ ಪಟ್ಟಿಯಲ್ಲಿ ಕಂಡುಬರುತ್ತವೆ. ಮೈಭಾಗದಲ್ಲಿ ಯಕ್ಷ-ಯಕ್ಷಿಯರ ಪುಷ್ಪವೃಷ್ಟಿಯನ್ನು ಮಾಡುವ ಸನ್ನಿವೇಶ ಸೊಗಸಾಗಿದೆ. ಪ್ರತಿಯೊಂದು ಅವತಾರದ ಚಿತ್ರಗಳಿಗೂ ಮೇಲೆ ಕಮಾನಿನಂತೆ ರಚಿಸಿ ಚಿತ್ರಗಳು ಪ್ರತ್ಯೇಕವಾಗಿ ಕಾಣುವಂತೆ ಚಿತ್ರಿಸಿದ್ದಾರೆ. ಮೇಲ್ಭಾಗದಲ್ಲಿ ಮತ್ತು ಕೆಳಭಾಗದ ಪಟ್ಟಿಯಲ್ಲಿ ಅಲಂಕಾರಿಕ ನಕ್ಷೆಗಳನ್ನು ಸುರುಳಿಯಾಕಾರದಲ್ಲಿ ಚಿತ್ರಿಸಲಾಗಿದೆ.

**ಒಂದನೆಯ ರೇಖಾಚಿತ್ರ ಮತ್ಸ್ಯಾವತಾರವನ್ನು ತೋರಿಸುತ್ತದೆ.** ಕೆಳಗಿನ ಭಾಗ ಮೀನಿನಿಂದ (ಮತ್ಸ್ಯ) ಕೂಡಿದ್ದು ಹಿಂದಿನ ಕೈಗಳು ಚಕ್ರಗಳಿಂದ ಕೂಡಿದೆ. ಮುಂದಿನ ಕೈ ವರದ ಹಸ್ತವಾಗಿದೆ. ನೀರಿನಲ್ಲಿ ಇರುವ ಹಾಗೆ ತೋರಿಸಲು ನೀರಿನ ಅಲೆಗಳನ್ನು ಚಿತ್ರಿಸಲಾಗಿದೆ.

**ಎರಡನೆಯ ರೇಖಾಚಿತ್ರವು ಕೂರ್ಮಾವತಾರದ,** ಚಿತ್ರವು ಇದೂ ಕೂಡ ಮೇಲಿನಂತೆ ದೇಹದ ಕೆಳಭಾಗವು ಆಮೆಯ (ಕೋರ್ಮ) ದೇಹವನ್ನು ಹೊಂದಿದ್ದು ಈ ಚಿತ್ರದಲ್ಲಿ ಸಹ ಕೈಗಳಲ್ಲಿ ಶಂಖ, ಚಕ್ರಗಳನ್ನು ರಚಿಸಲಾಗಿದೆ. ಮುಂದಿನ ಕೈಗಳು ವರದಹಸ್ತಗಳಿಂದ ಕೂಡಿದೆ.

**ಮೂರನೆಯ ಅವತಾರವಾಗಿರುವ ವರಾಹವತಾರದ ರೇಖಾ ಚಿತ್ರವಾಗಿದೆ.** ವಿಷ್ಣುವು ವರಾಹದ ಮುಖವನ್ನು ಹೊಂದಿದ ಕೈಗಳಲ್ಲಿ ಶಂಖ ಚಕ್ರಧಾರಿಯಾಗಿದ್ದಾನೆ. ವರಾಹ ಮುಖದಲ್ಲಿ ಕೋರೆಹಲ್ಲಿನಿಂದ ಪೃಥ್ವಿಯನ್ನು ಹಿಡಿದಿರುವ ದೃಷ್ಯ ಮತ್ತು ಎಡಗಾಲು ನಾಗರ ಹಾವಿನ ಹೆಡೆಯ ಮೇಲೆ ಇದೆ.

---

೩. ಶೈಲಾ ಬಡೋಲ, ಸಂತ ಶುಭರಾಯರ ಕಲಾಕೃತಿಗಳು, ಪುಟ.೨೮

ನಾಲ್ಕನೆಯ ಚಿತ್ರ ಉಗ್ರನರಸಿಂಹನ ಅವತಾರವಾಗಿದೆ. ಈ ಅವತಾರದಲ್ಲಿ ವಿಷ್ಣುವು ಸಿಂಹದ ಮುಖವನ್ನು ಹೊಂದಿದ್ದು, ಉಗ್ರರೂಪ ತಾಳಿದ ವಿಷ್ಣುವಿನ ಕೈಗಳಲ್ಲಿ ಶಂಖ, ಚಕ್ರಧಾರಿಯಾಗಿದ್ದಾನೆ. ಮುಂದಿನ ಎರಡು ಕೈಗಳಲ್ಲಿ ಒಂದು ಅಭಯ ಹಸ್ತ, ಒಂದು ವರದ ಹಸ್ತದಿಂದ ಕೂಡಿದ ರೇಖಾಚಿತ್ರವಾಗಿದೆ. ಮುಖವು ಸಿಂಹ ಘರ್ಜನೆಯಿಂದ ಕೂಡಿದೆ. ಕಣ್ಣುಗಳ ವಿಶಾಲವಾಗಿದೆ.

ಐದನೆಯದಾಗಿ ವಾಮನವತಾರ. ಈ ಅವತಾರವು ಬಲಿಚಕ್ರವರ್ತಿಯ ಗರ್ವವನ್ನು ಹರಣ ಮಾಡುವ ಸಲುವಾಗಿ ಮಹಾವಿಷ್ಣುವು ಒಬ್ಬ ಬ್ರಾಹ್ಮಣ ಬಾಲಕನ ರೂಪದಲ್ಲಿ ಬಂದು ಬಲಿ ಚಕ್ರವರ್ತಿಗೆ ದಾನವನ್ನು ಕೇಳುತ್ತಾನೆ. ಕೇವಲ ಮೂರು ಪಾದ ಜಾಗವನ್ನು ಭಿಕ್ಷೆ ನೀಡು ಎಂದು ಕೇಳಿ ಒಂದು ಪಾದವನ್ನು ಭೂಮಿಗೆ ಇನ್ನೊಂದು ಪಾದವನ್ನು ಆಕಾಶಕ್ಕೆ ಇಡುತ್ತಾನೆ. ಈ ಚಿತ್ರದಲ್ಲಿ ಮುಖವು ಮುಗ್ಧ ಬಾಲಕನಂತಿದ್ದು ಒಂದು ಕೈಯಲ್ಲಿ ಕಮಂಡಲವನ್ನು ಹಿಡಿದಿದ್ದಾನೆ. ಇನ್ನೊಂದು ಕೈಯಲ್ಲಿ ಛತ್ರಿಯನ್ನು ಹಿಡಿದುಕೊಂಡಿದ್ದಾನೆ.

ಆರನೆಯದಾಗಿ ಪರಶುರಾಮನ ಅವತಾರವಾಗಿದೆ. ಜಮದಗ್ನಿ ಮತ್ತು ರೇಣುಕಾ ದೇವಿಯ ಮಗನಾಗಿ ಜನಿಸಿ ತಂದೆಯ ಆಜ್ಞೆಯಂತೆ ತಾಯಿಯ ಶಿರವನ್ನು ಕಡಿದು ತಂದೆಯ ವರಪ್ರಸಾದದಿಂದ ಮತ್ತೆ ತಾಯಿಯನ್ನು ಮರಳಿ ಪಡೆದಿರುವ ಈ ಪರಶುರಾಮನ ಅವತಾರದ ಮುಂದೆ ಕಾರ್ತಿಕ ವೀರಾರ್ಜುನನ್ನು ಸಂಹರಿಸಿದ ಸಂದರ್ಭ ಅತ್ಯಂತ ಉಗ್ರವಾಗಿದೆ. ಬಲಗೈಯಲ್ಲಿ ಪರುಶವನ್ನು ಕೊಡಲಿ ಹಿಡಿದು ಎಡಗೈಯನ್ನು ಸೊಂಟದ ಮೇಲೆ ಇರಿಸಿ ನಿಂತ ಭಂಗಿ ಅತ್ಯಂತ ಗಂಭೀರವಾಗಿದೆ.

ಏಳನೆಯದಾಗಿ ಶ್ರೀರಾಮ ಅವತಾರವಾಗಿದೆ. ರಾಮನು ಎಡಗೈಯಲ್ಲಿ ಬಿಲ್ಲನ್ನು ಹಿಡಿದು ಬಲಗೈ ವರದ ಹಸ್ತವನ್ನು ಹೊಂದಿದ್ದಾನೆ. ಬೆನ್ನಿಗೆ ಬಾಣ ಬತ್ತಳಿಕೆಯನ್ನು ಧರಿಸಿದ್ದಾನೆ.

ಎಂಟನೆಯದಾಗಿ ಕೃಷ್ಣಾವತಾರ. ಈ ಅವತಾರದ ಚಿತ್ರದಲ್ಲಿ ಕೃಷ್ಣನ ಬಲಗೈ ವರದ ಹಸ್ತವಾಗಿದೆ. ಎಡಗೈಯನ್ನು ಸೊಂಟದ ಮೇಲೆ ಇರಿಸಿಕೊಂಡ ಭಂಗಿಯಲ್ಲಿದೆ. ಶ್ರೀ ಕೃಷ್ಣನು ಈ ಅವತಾರದಲ್ಲಿ ಅಧರ್ಮಿಗಳಾದ ಕೌರವರನ್ನು ಪಾಂಡವರಿಂದ ನಾಶಪಡಿಸಿ ಧರ್ಮಕರ್ತರಾದ ಪಾಂಡವರಿಗೆ ರಾಜ್ಯವನ್ನು ದೊರಕಿಸಿ ಕೊಟ್ಟು ಅರ್ಜುನನಿಗೆ ಭಗವದ್ಗೀತೆಯನ್ನು ಭೋಧನೆ ಮಾಡಿದ ಅವತಾರವಾಗಿದೆ.

ಒಂಬತ್ತನೆಯದಾಗಿ ಭೌದ್ಧಾವತಾರವಾಗಿದೆ. ಮಹಾವಿಷ್ಣು ಈ ಅವತಾರದಲ್ಲಿ ಜ್ಞಾನ ಮುದ್ರೆಯ ಕೈಯನ್ನು ಹೊಂದಿದ್ದು ಇನ್ನೊಂದು ಕೈ ಯೋಗ ಮುದ್ರೆಯಲ್ಲಿದೆ. ತಲೆಯ ಮೇಲೆ ಗುಂಗುರು ಕೂದಲು ಕಾಣಬಹುದು.

**ಹತ್ತನೆಯದು ಕಲ್ಕಿ ಅವತಾರವಾಗಿದೆ.** ಕುದುರೆಯ ಮುಖವುಳ್ಳದ್ದಾಗಿದೆ. ಖಡ್ಗ ಗುರಾಣಿಯನ್ನು ಎರಡೂ ಕೈಯಲ್ಲಿ ಹಿಡಿದುಕೊಂಡು ನಿಂತಿರುವ ಭಂಗಿಯಲ್ಲಿದೆ. ಈ ಎಲ್ಲ ಅವತಾರಗಳಲ್ಲಿ ವಿಷ್ಣು ಕಿವಿಯಲ್ಲಿ ಕರ್ಣಕುಂಡಲವನ್ನು ಧರಿಸಿದ್ದಾನೆ. ಮತ್ತು ಹಣೆಯ ಮೇಲೆ ನಾಮವನ್ನು ಕಾಣಬಹುದು. ಈ ಎಲ್ಲ ಅವತಾರಗಳ ಚಿತ್ರಗಳು ಒಂದೇ ಎತ್ತರದ ಗಾತ್ರದಲ್ಲಿ ಮೂಡಿಬಂದಿವೆ.

ಕಲೆ ಎನ್ನುವುದು ಮಾನವನ ವೈಶಿಷ್ಟ್ಯ. ಅಂತೆಯೇ ನಮ್ಮ ಸುತ್ತಲಿನ ನಿಸರ್ಗ ಹಾಗೂ ದೈನಂದಿನ ಜನಜೀವನಗಳು, ಜನಸಾಮಾನ್ಯರಲ್ಲಿ ಪ್ರಭಾವ ಬೀರುವಂತೆ ಕಲಾವಿದನ ಮನಸ್ಸಿನ ಮೇಲೂ ಪ್ರಭಾವ ಬೀರುತ್ತದೆ. ಆದರೆ ಕಲಾವಿದನಲ್ಲಿರುವ ಆತನ ಸಂವೇದನೆಯ ಹೊರಗಿನ ಈ ಘಟನೆ ಹಾಗೂ ದೃಶ್ಯಗಳು ಉಳಿದವರಿಗಿಂತ ಭಿನ್ನವಾಗಿ, ಹೆಚ್ಚು ತೀವ್ರವಾಗಿ ಸ್ಪಂದಿಸುತ್ತದೆ. ಈ ಸ್ಪಂದನ ಹಾಗೂ ತುಡಿತಗಳು ಅವನ ಮಾಧ್ಯಮದ ಮೂಲಕ ಪ್ರಕಟವಾಗಿ ಕಲಾಕೃತಿಯೆನಿಸುತ್ತದೆ.

ವಿವಿಧ ಕಲೆಗಳು ಮನುಷ್ಯನು ವಿವಿಧ ಇಂದ್ರಿಯಗಳಿಗೆ ಸಂಬಂಧಿಸಿ ತೃಪ್ತಿಕೊಡುತ್ತವೆ. ಹೀಗೆ ಸಂಗೀತ ಹಾಗೂ ಸಾಹಿತ್ಯಗಳು ಕಿವಿಗೆ ಸಂಬಂಧಿಸಿದ ಕಲೆಗಳಾಗಿವೆ. ಸಾಹಿತ್ಯವನ್ನು ಕಿವಿಯಿಂದ ಕೇಳುವಂತೆ ಕಣ್ಣಿನಿಂದ ಓದಿಯೂ ಸಂತಸ ಪಡಬಹುದು ಆದರೆ ಸಂಗೀತಕ್ಕೆ ಕಿವಿಯೇ ಪ್ರದಾನ ಇಂದ್ರಿಯವಾಗಿದೆ. ಇದರ ಹಾಗೆಯೇ ಚಿತ್ರಕಲೆ, ಶಿಲ್ಪಕಲೆ ಮತ್ತು ವಾಸ್ತುಶಿಲ್ಪಗಳಂತಹಯ ಕಲೆಗಳು ಕಣ್ಣಿಗೆ ಸಂಬಂಧಿಸಿದವು. ಸಂತ ಶುಭರಾಯರು ನೃತ್ಯ, ಸಾಹಿತ್ಯ, ತತ್ವಜ್ಞಾನಿ, ಕಲಾವಿದರಾಗಿ ಗುರುತಿಸಿಕೊಂಡಿದ್ದಾರೆ. ಹಾಗೆ ಇವರ ಕಲೆಯಲ್ಲಿ ಸುತ್ತಮುತ್ತಲಿನ ಪರಿಸರ, ಪೌರಾಣಿಕ ವಿಷಯಗಳನ್ನಾಧರಿಸಿದವುಗಳಾಗಿವೆ. ಮತ್ತು ಅದರಲ್ಲಿ ವಿಷ್ಣುವಿನ ದಶಾವತಾರ, ಕೃಷ್ಣನ ಲೀಲೆಗಳು ಇತ್ಯಾದಿ ವಸ್ತುವಿಷಯಗಳು ಒಳಗೊಂಡಿವೆ. ಇವರ ಕಲಾಕೃತಿಯಲ್ಲಿ ರಸಗಳನ್ನು ಕಾಣುವಂತಹ ವಿಚಾರಗಳು ಮೂಡಿಬರುತ್ತವೆ.

ಸಂತ ಶುಭರಾಯರು ರಚಿಸಿದ ಹಲವಾರು ಕಲಾಕೃತಿಗಳನ್ನು ಅಧ್ಯಯನದ ದೃಷ್ಟಿಯಿಂದ ಇಲ್ಲಿ ದಶವತಾರದ ಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಸಂತ ಶುಭರಾಯರ ಚಿತ್ರಕಲಾಕೃತಿಗಳು**

**ವಿಷ್ಣುವಿನ ದಶಾವತಾರದ ಚಿತ್ರಗಳು:**

ವಿಷ್ಣುವಿನ ದಶಾವತಾರಗಳು ಅನೇಕ ಶಾಸ್ತ್ರಗ್ರಂಥಗಳಲ್ಲಿ ಉಲ್ಲೇಖಗೊಂಡಂತೆ ಕ್ರಮಾನುಸಾರವಾಗಿ ಮೊದಲಿಗೆ ಬರುವುದು ಮತ್ಸ್ಯಾ ಅವತಾರ, ಕೂರ್ಮ್ಮ, ವರಾಹ, ನರಸಿಂಹ. ವಾಮನ, ಪರುಶುರಾಮ, ರಾಮಾವತಾರ ಕೃಷ್ಣಾ, ಬೌದ್ಧ, ಕೊನೆಯದಾಗಿ ಕಲ್ಕೀಯಾಗಿದೆ. ಇಲ್ಲಿ ಶ್ರೀ ವಿಷ್ಣು ಭೂಮಿಯಲ್ಲಿ ಹತ್ತು ರೀತಿಯಿಂದ ' ಜನ್ಮ ಪಡೆದು ಪ್ರತಿಯುಗದಲ್ಲಿಯೂ

ಒಂದೊಂದು ಭಿನ್ನ ಅವತಾರ ಹೊಂದಿದ್ದಾನೆ. ಯಾವುದೇ ಅವತಾರವನ್ನು ಹೊಂದಿ ಬಂದರು ಪ್ರಮುಖ ಉದ್ದೇಶ ಭಕ್ತರನ್ನು ಉದ್ಧಾರ ಮಾಡುವದಾಗಿದೆ.

ಮಹಾಭಾರತದ ಸನ್ನಿವೇಶ ಒಂದರಲ್ಲಿ ಧರ್ಮರಾಜನು ಸಹಜ ಕುತೂಹಲದಿಂದ ದಶಾವತಾರದ ಮಹಿಮೆಯ ಬಗ್ಗೆ ಮಾರ್ಕಂಡೇಯ ಮಹರ್ಷಿಗಳನ್ನು ಕೇಳಿದಾಗ ಅವರು ವಿಸ್ತಾರವಾಗಿ ಹತ್ತು ಅವತಾರಗಳ ಬಗ್ಗೆ ವಿವರಣೆ ನೀಡುತ್ತಾರೆ. ತಮೋಗುಣ ಅದರ ಪರಿಣಾಮವನ್ನು ನಿಯಂತ್ರಿಸುವುದು ಸತ್ವಗುಣವನ್ನು ಉಳಿಸುವುದು ವಿಷ್ಣುವಿನ ಅವತಾರಗಳಲ್ಲಿನ ಮುಖ್ಯ ಗುಣವೆಂದು ವರ್ಣಿಸಲಾಗಿದೆ.

'ಮತ್ಸ್ಯ ಕೂರ್ಮವರಾಹಶ್ವ ನಾರಸಿಂಹಶ್ವ ವಾಮನ।
ರಾಮೋ ರಾಮಶ್ವ ಕೃಷ್ಣಶ್ಚ ಬುದ್ಧ ಕಲ್ಕಿನಮೋ ನಮಃ॥'

ಶ್ರೀಹರಿಯು ಲೋಕಕಲ್ಯಾಣಕ್ಕಾಗಿ ಹತ್ತು ಅವತಾರಗಳನ್ನು ತಾಳಿದ ವಿವರಣೆಯನ್ನು ಈ ಶ್ಲೋಕವು ತಿಳಿಸುತ್ತದೆ. ಈ ಅವತಾರಗಳನ್ನು ಕಲಾವಿದ ಸಂತ ಶುಭರಾಯ ತನ್ನದೇ ಆದ ಗ್ರಹಿಕೆಯಲ್ಲಿ ಕುಂಚದಲ್ಲಿ ಸೆರೆಹಿಡಿದಿದ್ದಾನೆ. ಅವರದೇ ಆದ ವರ್ಣವಿನ್ಯಾಸ, ಸಂಯೋಜನೆ, ತಂತ್ರಗಾರಿಕೆ, ವಸ್ತುವಿನ್ಯಾಸಗಳಲ್ಲಿ ಚಿತ್ರಣ ಮಾಡಿದ್ದು ಅವುಗಳನ್ನು ಇಲ್ಲಿ ಒಂದೊಂದಾಗಿ ವಿಶ್ಲೇಷಣೆಗೆ ಒಳಪಡಿಸಿದೆ.

**ಕುಮಾರ ಕಕ್ಕಯ್ಯ ಪೋಳ**

ಯದಾ ಯದಾ ಹಿಧರ್ಮಸ್ಯ ಗ್ಲಾನಿರ್ಭವತಿ ಭಾರತ।
ಅಭ್ಯುತ್ಥಾನವ ಧರ್ಮಸ್ಯ ತದಾನಂ ಸೃಜಾಮ್ಯ ಹಂ॥

ಯಾವ ಯಾವ ಕಾಲಕ್ಕೆ ಭಾರತ ದೇಶದಲ್ಲಿ ಅಧರ್ಮ ತಲೆದೋರುವದೋ, ಆಯಾ ಕಾಲಕ್ಕೆ ನಾನು ಹುಟ್ಟಿಬರುವೆನು ಎಂದು ತಾನೇ ಹೇಳಿಕೊಂಡ ಆ ವಿಷ್ಣು. ತನ್ನ ಈ ಹತ್ತೂ ಅವತಾರಗಳಲ್ಲಿ ಧರ್ಮದ ಉದ್ಧಾರ ಕುರಿತು, ಅದಾವ ಮಹತ್ಕಾರ್ಯಗಳನ್ನು ಮಾಡಿದ್ದಾನೆ ಎಂಬುದನ್ನು ಸ್ವಲ್ಪ ನೋಡೋಣ:

**ಮತ್ಸ್ಯಾವತಾರ ಚಿತ್ರ–೧**

ಈ ಅವತಾರದಲ್ಲಿ ಆ ವಿಷ್ಣುಪರಮಾತ್ಮ, ಈ ಭೂಮಿ ನೀರಿನಲ್ಲಿ ಮುಳಗಿ ಹೋಗುತ್ತಿರುವಾಗ ಎಲ್ಲಾ ಬೀಜಗಳನ್ನೂ ಮತ್ತು ಒಬ್ಬ ಋಷಿಯನ್ನೂ, ಒಂದು ದೋಣಿಯಲ್ಲಿ ಕೂಡ್ರಿಸಿ ಆ ದೋಣಿಯನ್ನು ಎಳೆದುಕೊಂಡು, ಈಜುತ್ತ ಬಂದು ಮೇರು ಪರ್ವತದ ಶಿಖರಕ್ಕೆ ಅದನ್ನು ಕಟ್ಟಿದನಂತೆ, ಆ ಬಳಿಕ ಆ ದೋಣಿಯಲ್ಲಿದ್ದ, ಬೀಜ ಮತ್ತು ಋಷಿಯಿಂದ ಈ ಜಗತ್ತು ಮತ್ತೆ ಸೃಷ್ಟಿಯಾಯಿತಂತೆ! ಸಮಸ್ತ ಭೂಮಿಯೇ ನೀರಿನಲ್ಲಿ ಮುಳುಗಿದಾಗ, ಒಂದು ಮೀನು, ಎಲ್ಲ

ಬೀಜಗಳನ್ನು ಎಲ್ಲ ಜೀವರಾಶಿಯನ್ನೂ, ಒಂದು ದೋಣಿಯಲ್ಲಿ ಹಾಕಿಕೊಂಡು ಅದನ್ನು ಎಳೆದುಕೊಂಡು ತಂದು ಪರ್ವತದ ಶಿಖರಕ್ಕೆ ಕಟ್ಟುವದೆಂದರೇನು? "ಒಂದು ಏಡಿ ಒಬ್ಬ ದೊಡ್ಡ ರಾಜನ ಮಗಳನ್ನು ಮದುವೆಯಾಗಿತ್ತಂತೆ" ಎಂದು ಅಜ್ಜಿ ಪುಟಾಣಿಗಳಿಗೆ ಹೇಳುವ ಕಥೆಗೂ, ಆ ವಿಷ್ಣು ಈ ಮತ್ಸ್ಯಾವತಾರ ತಾಳಿದ್ದಕ್ಕೂ, ಏನಾದರೂ ಅಂತರ ಇದೆಯೇ? ಇದಕ್ಕೆ ದೇವನ ಅವತಾರ ಎನ್ನಬಹುದೇ? "ವೇದಗಳಲ್ಲಿ ಹೇಳಿದ ಕೆಲವೊಂದು ಸನ್ನಿವೇಶಗಳು, ಮಕ್ಕಳ ಮಾತಿನಂತಿವೆ" ಎಂದು ಆಂಗ್ಲ ವಿದ್ವಾಂಸ ಮ್ಯಾಕ್ಸ್ ಮುಲ್ಲರ್ ಅವರು ಅಭಿಪ್ರಾಯಪಟ್ಟಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ವಿಷ್ಣುವಿನ ದಶಾವತಾರಗಳಲ್ಲಿ ಮೊದಲನೆಯದು ಮತ್ಸ್ಯಾವತಾರವಾಗಿದ್ದು ಇಲ್ಲಿ ವಿಷ್ಣುವು ಮತ್ಸ್ಯರೂಪಧರಿಸಿದ್ದು ಕಂಡುಬುರುತ್ತದೆ. ಈ ಚಿತ್ರವು ಅಖಂಡವಾದ ಆಯತ ಆಕೃತಿಯಲ್ಲಿ ಅಂದರೆ ಉದ್ದವಾದ ಪಟ್ಟಿಕೆಯಲ್ಲಿ ಕಂಡು ಬರುತ್ತದೆ. ಮತ್ಸ್ಯಾವತಾರದಲ್ಲಿ ವಿಷ್ಣುವಿನ ಮೈಬಣ್ಣವಾಗಿ ನೀಲಿಯನ್ನು ಬಳೆಯಲಾಗಿದೆ. ಕಿರೀಟಧಾರಿಯಾದ ವಿಷ್ಣು ನಾಲ್ಕು ಕೈಗಳನ್ನು ಹೊಂದಿದ್ದಾನೆ. ಬಾಗಿದ ಕಪ್ಪು ಹುಬ್ಬಿನ ಕೆಳಭಾಗದಲ್ಲಿ ಕಲಾವಿದ ತನ್ನದೇಯಾದ ಶೈಲಿಯಲ್ಲಿ ಉದ್ದವಾದ ಕಣ್ಣುಗಳನ್ನು ರಚನೆಮಾಡಿದ್ದಾನೆ. ಮೇಲಿನ ಎರಡು ಕೈಗಳಲ್ಲಿ ಆಯುಧಗಳನ್ನು ಹಿಡಿದಿರುವ ವಿಷ್ಣುವಿನ ಕೆಳಗಿನ ಕೈಗಳಲ್ಲಿ ಯಾವ ಆಯುಧವು ಕಂಡುಬರುವುದಿಲ್ಲ ಕತ್ತಿನ ಭಾಗದಿಂದ ಕೆಂಪು ವಸ್ತ್ರವು ಅಕ್ಕಪಕ್ಕದಲ್ಲಿ ಇಳಿಬಿದ್ದಿರುವುದು ಕಂಡುಬರುತ್ತದೆ. ಸೊಂಟದ ಕೆಳಭಾಗದಿಂದ ವಿಷ್ಣು ಮೀನಿನ ರೂಪಧರಿಸಿದ್ದು ಇದು ಹಿನ್ನೆಲೆಯ ಲೇಪನ ಹಳದಿವರ್ಣದ ಮೇಲೆ ಕಪ್ಪು ವರ್ಣದಿಂದ ರೇಖೆಯನ್ನು ರಚಿಸಲಾಗಿದೆ. ಇಲ್ಲಿ ಪಕ್ಕದಲ್ಲಿ ದಟ್ಟ ಹೋರ ರೇಖೆಗೆ ಹೆಚ್ಚಾಗಿ ಕಪ್ಪು ಮಿಶ್ರಿತ ಹಳದಿ ವರ್ಣವನ್ನೇ ಬಳಸಲಾಗಿದೆ. ಅಕ್ಕ ಪಕ್ಕದಲ್ಲಿ ಕಂಡುಬರುವ ಎಲೆಗಳನ್ನು ಕಲಾವಿದ ಜಾಣ್ಮೆಯಿಂದ ಕಮಾನಿನಾಕಾರದಲ್ಲಿ ಚಿತ್ರಿಸಿದ್ದಾರೆ. ಇಲ್ಲಿ ಎಲೆಗಳಿಗೆ ದಟ್ಟ ಹಸಿರು ಬಣ್ಣ ಬಳಸಲಾಗಿದೆ. ಹೂಗಳಿಗೆ ಕೆಂಪು ವರ್ಣಬಳಸಲಾಗಿದೆ. ಕರೀಟದ ಮೇಲ್ಭಾಗದ ತುದಿಯಲ್ಲಿ ಪ್ರತ್ಯೇಕವಾದ ಎಲೆಹೂವುನ್ನು ರಚಿಸಿದ್ದಾರೆ. ಈ ಚಿತ್ರವು ಕಾಗದದ ಮೇಲೆ ರಚನೆಯಾಗಿದ್ದು ಇದೊಂದು ಕಿರುರೂಪ ಕಲೆಯ ಉತ್ತಮ ವ್ಯಕ್ತಿಗೆ ಸಲ್ಲಿಸಬೇಕಾದ ಪ್ರಾಶಸ್ತ್ಯವನ್ನು ಕಲ್ಪಿಸಲಾಗಿದೆ. ನೆರಳು ಬೆಳಕಿನ ವಿನ್ಯಾಸವು ಅಷ್ಟೊಂದು ಕಂಡುಬರುವುದಿಲ್ಲವಾದರೂ ವರ್ಣಗಳಲ್ಲಿ ಅಂದರೆ ದಪ್ಪ, ತಿಳುವರ್ಣಗಳಿಂದ ಚಿತ್ರ ಸಮತೋಲನವನ್ನು ಹೊಂದಿದೆ. ಸಂಯೋಜನೆ ಯಥಾದರ್ಶನದ ಎಲ್ಲಾ ಅಂಶಗಳು ಈ ಚಿತ್ರದಲ್ಲಿ ಅಳವಡಿಸಿಕೊಳ್ಳಲಾಗಿದೆ.

**ಕೂರ್ಮಾವತಾರ ಚಿತ್ರ-೨**

ಭೂಮಿ ನೀರಿನಲ್ಲಿ ಪೂರ್ಣ, ಮುಳುಗಿ ಹೋದಾಗ, ಮಂದರ ಪರ್ವತವನ್ನು ತನ್ನ ಬೆನ್ನ ಮೇಲೆ ಹೊತ್ತುಕೊಂಡು ತಂದು, ಯಥಾಸ್ಥಿತಿ ಉಂಟು ಮಾಡಿದನಂತೆ! ಒಂದು ಆಮೆ,

ಮಂದರ ಪರ್ವತವನ್ನು ಎತ್ತುವುದೆಂದರೇನು? ಭೂಮಿಯನ್ನೇ ತನ್ನ ಬೆನ್ನ ಮೇಲೆ ಹೊತ್ತಾಗ, ಈ ಆಮೆ ನಿಂತದ್ದೆಲ್ಲಿ? ಕಿವುಡರು ಕೇಳುವ, ಮೂಗರು ಹಾಡುವ, ಹೆಳವರು ಓಡುವ, ನಳಿಕೆಗಳಲ್ಲಿ ಪ್ರಣಾಳ ಶಿಶುಗಳು ಹುಟ್ಟುವ ಇಂದಿನ ವಿಜ್ಞಾನ ಯುಗದಲ್ಲಿ, ಇದು ಸೃಷ್ಟಿಕರ್ತನಾದ ವಿಷ್ಣುವಿನ ಎರಡನೆಯ ಅವತಾರವೆಂದರೆ, ನಮ್ಮ ಅಜ್ಞಾನದ ಪ್ರದರ್ಶನವಾಗುವುದೇ ಹೊರತು, ಇದಕ್ಕೆ ಯಾವುದೇ ಅರ್ಥ ಆಗದು!!

ಈ ಎರಡನೆಯ ಅವತಾರವು ಸಹ ಒಂದೇ ಪಟ್ಟಿಕೆಯಲ್ಲಿ ರಚನೆಯಾಗಿದ್ದು ಇದು ಕೂರ್ಮಾ ಅವತಾರವಾಗಿದೆ. ಇಲ್ಲಿಯೂ ಸಹ ವಿಷ್ಣುವಿನ ಮೈಬಣ್ಣವಾಗಿ ತಿಳಿನೀಲಿಯನ್ನು ಬಳೆಯಲಾಗಿದೆ. ನಾಲ್ಕು ಕೈಗಳನ್ನು ಹೊಂದಿದ ವಿಷ್ಣುವಿನ ಚಿತ್ರದ ಕಾಗದಕ್ಕಿಂತಲೂ ಹೋಗಿರುವುದರಿಂದ ಮೂರು ಕೈಗಳು ಮಾತ್ರ ಇಲ್ಲಿ ಕಂಡುಬರುತ್ತೇವೆ. ಮತ್ಸ್ಯಾವತಾರದಲ್ಲಿ ರಚನೆಯಾದ ಹಾಗೆ ಇಲ್ಲಿಯೂ ಸಹ ಕಿರೀಟ, ಆಭರಣಗಳು, ಆಯುಧ, ಕೆಂಪು ವಸ್ತ್ರ, ಎಲೆ ಹೂಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಮುಖ್ಯವಾಗಿ ಇಲ್ಲಿ ಸೊಂಟದ ಕೆಳಭಾಗದಿಂದ ರಚನೆಯಾದ ಭಾಗವು ಆಮೆಯ ರೂಪಪಡೆದಿದೆ. ಇದೂ ಸಹ ಮೇಲಿನ ಹಾಗೇ ರೇಖಾ ಪ್ರಧಾನವಾಗಿದೆ. ಈ ಎರಡೂ ಅವತಾರಗಳು ಒಂದೇ ಪಟ್ಟಿಕೆಯಲ್ಲಿದ್ದುದು ಕಂಡುಬರುತ್ತವೆ. ವರ್ಣಗಳಲ್ಲಿ ಪ್ರಖರತೆ ಇದ್ದು ಸಂಯೋಜನೆಯಲ್ಲಿ ತನ್ನತನವನ್ನು ಇಲ್ಲಿಯೂ ಮುಂದುವರಿಸಿದ್ದಾನೆ.

**ವಿಷ್ಣುವಿನ ವರಾಹವತಾರ ಚಿತ್ರ-೩**

ಸಮುದ್ರ ವಸನೇ ದೇವಿ ಪರ್ವತಸ್ತನ ಮಂಡಲೇ।
ವಿಷ್ಣು ಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವಮೇ॥

ಅಂದರೆ ಸಮುದ್ರವೇ ಸೀರೆಯಾಗಿ, ಪರ್ವತಗಳೇ ಸ್ತನಗಳಾಗಿ, ವಿಷ್ಣುವಿನ ಪತ್ನಿಯಾದ ಭೂದೇವಿಯೇ ನಿನಗೆ ನನ್ನ ನಮಸ್ಕಾರಗಳು ಎಂದು ಈ ಭೂಮಿಯನ್ನೇ ಆ ವಿಷ್ಣುವಿನ ಪ್ರೇಯಸಿಯನ್ನಾಗಿ ಮಾಡಿದ ಜನಗಳು, ತಮ್ಮವನೊಬ್ಬನನ್ನು ಎತ್ತಿಕಟ್ಟುವುದಕ್ಕಾಗಿ ತಮ್ಮವನೊಬ್ಬನಿಗೆ ದೇವತಾ ಸ್ವರೂಪ ಕೊಡುವುದಕ್ಕಾಗಿ, ಎಂತೆಂಥ ಅರಿಷ್ಟಗಳನ್ನು ಎಷ್ಟೊಂದು ಧೂರ್ತತನದಿಂದ, ಎಷ್ಟೊಂದು ಮಾರ್ಮಿಕವಾಗಿ ಬರೆದಿಟ್ಟಿದ್ದಾರೆ ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಭೂಮಿಯ ಮೇಲೆ ಹುಟ್ಟಿ ಬಂದ ವಿಷ್ಣು, ಭೂಮಿಯನ್ನೇ ಭೋಗಿಸುವುದೆಂದರೇನು? ಇದು ಮಗ, ತಾಯಿಯನ್ನು ಭೋಗಿಸಿದಂತಾಗುವುದಿಲ್ಲವೇ? ಹಂದಿಗೆ "ತಾಯ್ಗಂಡ" ಎಂಬ ಶಬ್ದ ಬಳಸುವುದನ್ನು ಸ್ಮರಿಸಿಕೊಂಡರೆ, ಇದಕ್ಕೆ "ವರಾಹ" ಅವತಾರವೆಂದೇ ಯಾಕೆ ಹೆಸರಿಸಿದರು ಎಂಬುದು ಗೋಚರಿಸದೆ ಇರದು! ಅಂತೆಯೇ ವೇದಾದಿ ಧರ್ಮ ಗ್ರಂಥಗಳನ್ನು ಪರಾಮರ್ಶಿಸಿದ ವಿದ್ವಾಂಸರೊಬ್ಬರು, ವೈದಿಕ, ಧರ್ಮದ ದೇವದೇವತೆಗಳು, ತಾಯ್ಗಂಡರಾಗಿದ್ದರು, ಮಗಳ ಗಂಡರಾಗಿದ್ದರು ಎಂದು ಅಭಿಪ್ರಾಯಪಟ್ಟಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು!

ಮೂರನೆಯ ಅವತಾರವಾಗಿ ವಿಷ್ಣು ವರಾಹ ಅವತಾರ ತಾಳಿರುವುದನ್ನು ಇಲ್ಲಿಯೂ ಸಹ ಒಂದೇ ಪಟ್ಟಿಕೆಯಲ್ಲಿ ವರಾಹಅವತಾರ ಮತ್ತು ನರಸಿಂಹ ಅವತಾರದ ಚಿತ್ರಗಳು ಮೂಡಿಬಂದಿವೆ. ಇದರಲ್ಲಿ ಮೊದಲನೆಯದಾಗಿ ವರಾಹ ಅವತಾರವಾಗಿದ್ದು ಇಲ್ಲಿ ವಿಷ್ಣು ನಾಲ್ಕು ಕೈಗಳನ್ನು ಹೊಂದಿದ್ದು ಮೈ ಬಣ್ಣವನ್ನು ತಿಳು ನೀಲಿಯಿಂದ ಬಳೆಯಲಾಗಿದೆ. ಹಿಂದಿನ ಎರಡು ಅವತಾರದ ಹಾಗೆ ಇಲ್ಲಿಯೂ ಸಹ ಕಿರೀಟ, ಆಯುಧ, ಕೆಂಪುವಸ್ತ್ರ, ಆಭರಣಗಳು, ಗಿಡ, ಎಲೆ, ಹೂಗಳು, ರಚನೆಯಾಗಿವೆ. ಇಲ್ಲಿ ವಿಷ್ಣುವಿನ ಮುಖವು ವರಾಹ ರೂಪ ಪಡೆದಿದ್ದು ಅಲ್ಲದೇ ಎಡಕ್ಕೆ ಮುಖಮಾಡಿನಿಂತ ವಿನ್ಯಾಸದ ಚಿತ್ರವಾಗಿದೆ. ಇಲ್ಲಿ ಹಳದಿ ಪಂಚೆ ತೊಟ್ಟ ವಿಷ್ಣುವಿನ ಕಾಲದಲ್ಲಿಯ ಬಣ್ಣದ ವಿನ್ಯಾಸದ ಲೇಪನ ಬದಲಾವಣೆ ಕಂಡುಬರುತ್ತದೆ. ಆದರೆ ಚಿತ್ರಕ್ಕೆ ಯಾವ ತೊಂದರೆಯಾಗಿಲ್ಲ. ಈ ಚಿತ್ರಗಳಲ್ಲಿ ಹೂಗಳನ್ನು ರಚಿಸಿದಲ್ಲದೆ ದೊಡ್ಡ ದೊಡ್ಡ ಹೂಗಳು ಸಹ ಕಂಡುಬಂದಿವೆ.

**ನರಸಿಂಹಾವತಾರ ಚಿತ್ರ-೪**

ಹಿರಣ್ಯಕಶ್ಯಪನೆಂಬ ರಾಜ, ದೇವತೆಗಳನ್ನು ಪೀಡಿಸುತ್ತಿದ್ದನಂತೆ. ಆದರೆ ಅವನ ಹೊಟ್ಟೆಯಿಂದ ಹುಟ್ಟಿದ ಮಗ ಪ್ರಹ್ಲಾದ, ವಿಷ್ಣುವಿನ ಪರಮ ಭಕ್ತನಾಗಿದ್ದನಂತೆ. "ನನ್ನ ವೈರಿಯಾದ ವಿಷ್ಣುವನ್ನು ಆರಾಧಿಸುವೆಯಾ?" ಎಂದು ಹಿರಣ್ಯಕಶ್ಯಪ, ತನ್ನ ಮಗನಾದ ಪ್ರಹ್ಲಾದನಿಗೆ ತೊಂದರೆ ಕೊಡುತ್ತಿದ್ದನಂತೆ. ಅದಕ್ಕೆ ಕಾರಣ, ಈ ವಿಷ್ಣು ತನ್ನ ಭಕ್ತ ಪ್ರಹ್ಲಾದನ ಪರವಾಗಿ, ನರಸಿಂಹ ಅವತಾರ ತಾಳಿ, ಹಿರಣ್ಯಕಶ್ಯಪನನ್ನು ಕೊಂದು ಹಾಕಿದನಂತೆ? ಮಗನ ಬೆನ್ನು ತಟ್ಟಿ ಅವನ ತಂದೆಯನ್ನು ಕೊಂದು ಹಾಕಿವವನಿಗೆ, ದೇವಾಂತ ಸಂಭೋತನೆನ್ನಬಹುದೆ?

ಹಿರಣ್ಯಕಶ್ಯಪನನ್ನು ನರಸಿಂಹ ಅವತಾರ ತಾಳಿ ಕೊಂದು ಹಾಕಿದ್ದಾನೆ. ಆರ್ಯರ ಪರವಾಗಿ, ದ್ರಾವಿಡರ ಪ್ರಮುಖರಾದ ಇಬ್ಬರೂ ಸಹೋದರರನ್ನು, ಆ ವಿಷ್ಣು ತನ್ನ ಮೂಲವೇಷ ಮರೆಮಾಚಿ ಮೋಸ ಮಾಡಿ ಕೊಂದು ಹಾಕಿದ್ದಾನೆ ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ನಾಲ್ಕನೆಯ ಅವತಾರವಾಗಿ ವಿಷ್ಣು ನರಸಿಂಹ ಅವತಾರ ತಾಳಿದನು ಇಲ್ಲಿ ಸಿಂಹ ಮುಖಹೊಂದಿದ ವಿಷ್ಣುವಿನ ಕ್ರೂರ ಭಾವನೆಗಳು ಮೂಡಿಸುವ ಹಾಗೆ ಚಿತ್ರಣವಾಗಿದೆ. ನಾಲ್ಕು ಕೈಗಳನ್ನು ಹೊಂದಿದ ವಿಷ್ಣು ಮೇಲಿನ ಎರಡು ಕೈಗಳಲ್ಲಿ ಆಯುಧಗಳನ್ನು ಹಿಡಿದಿದ್ದಾನೆ. ಬಲಗೈಯು ಅಭಯ ಹಸ್ತವಾಗಿದೆ. ಎಡಗೈಯು ಸ್ವಲ್ಪ ಡೊಂಕಿಸಿ ಮುಂಚಾಚಿಕೊಂಡಿದೆ. ಇಲ್ಲಿ ವೃತ್ತಕಾರದ ಕಣ್ಣುಗಳು ಹಲ್ಲುಗಳನ್ನು ಸಂದರ್ಭಕ್ಕೆ ತಕ್ಕಂತೆ ಚಿತ್ರಿಸಲಾಗಿದೆ. ಕೇಶವು ರೇಖೆಯಿಂದ ಕೂಡಿದ್ದು ಕಿರೀಟಧಾರಿಯಾದ ನರಸಿಂಹನು ಹಲವಾರು ಆಭರಣಧಾರಿಯಾಗಿದ್ದಾನೆ. ಹಳದಿ ಪಂಚೆಯೊಟ್ಟು ಎರಡೂ ಕಾಲು ಡೊಂಕಿಸಿ ಕುಳಿತಿರುವ, ಚಿತ್ರವಾಗಿದೆ. ಈ ಎರಡು ಚಿತ್ರಗಳ

ಹಿನ್ನೆಲೆ ಲೇಪನ ತಿಳಿ ಹಳದಿ ವರ್ಣದ್ದಾಗಿದೆ. ಸೌಮ್ಯವರ್ಣಗಳು ಇಲ್ಲಿ ಪ್ರಧಾನವಾಗಿದ್ದರೂ ಪ್ರಕರವಾದ ಛಾಯೆಯನ್ನು ಕೊಡುವ ಸಲುವಾಗಿ ಅಲ್ಲಲ್ಲಿ ಪ್ರಾಥಮಿಕ, ದ್ವಿತೀಯ ತರಗತಿಯ ವರ್ಣಗಳನ್ನು ಸಂದರ್ಭಕ್ಕೆ ತಕ್ಕಂತೆ ಬಳಸಿಕೊಂಡು ಕಲಾತ್ಮಕತೆಯಿಂದ ಇಲ್ಲಿ ಚಿತ್ರ ವಿನ್ಯಾಸ ಗೊಳಿಸಲಾಗಿದೆ.

**ವಾಮನ ಅವತಾರ ಚಿತ್ರ-೫**

ಬಲಿ ಚಕ್ರವರ್ತಿ ಒಬ್ಬ ಬಲಾಢ್ಯ ರಾಜನಾಗಿದ್ದ ಯಜ್ಞ ಯಾಗಾದಿಗಳನ್ನು ಮಾಡಿಕೊಂಡು, ಆಗಿನ ದೇವದೇವತೆಗಳ ಪ್ರೀತಿಗೆ ಪಾತ್ರನಾಗಿದ್ದ. ಆಗಿನ ಕಾಲದ ಧಾರ್ಮಿಕ ಕಟ್ಟಳೆಗಳಿಗನುಗುಣವಾಗಿ, ಇನ್ನೊಂದು ಯಜ್ಞ ಮಾಡಿದರೆ, ಇಂದ್ರ ಪದವಿ ಅವನಿಗೇ ಸಿಗುವ ಸಾಧ್ಯತೆ ಇತ್ತು! ಆದರೆ ಅವನು ದ್ರಾವಿಡನಾದ ಕಾರಣ, ಇದು ಸ್ವರ್ಗದಲ್ಲಿರುವ ಆರ್ಯ ದೇವತೆಗಳಿಗೆ ಬೇಡವಾಯಿತು. ಇದಕ್ಕಾಗಿ ಎಲ್ಲ ಆರ್ಯರು ಸೇರಿಕೊಂಡು, ವ್ಯವಸ್ಥಿತವಾದ ಒಂದು ಪಿತೂರಿಯನ್ನೇ ಹೂಡಿದರು. ಈ ವಿಷ್ಣು, ವಾಮನ ಅವತಾರ ತಾಳಿ, ಆ ಬಲಿ ಚಕ್ರವರ್ತಿಯ ಹತ್ತಿರ ಬ್ರಾಹ್ಮಣ ವೇಷದಲ್ಲಿ ಬಂದನು. ತನಗೆ ಮೂರು ಪಾದ ಭೂಮಿ ದಾನ ಕೊಡಬೇಕೆಂದು ಕೇಳಿದನು. ಧಾರ್ಮಿಕ ಜೀವಿ ಮತ್ತು ಮೋಸ ವಂಚನೆ ಅರಿಯದ ಬಲಿ ಚಕ್ರವರ್ತಿ ಅದಕ್ಕೆ ಒಪ್ಪಿದನು. ಆದರೆ ಮೋಸಗಾರನಾದ ವಿಷ್ಣು, ತನ್ನ ಒಂದು ಪಾದವನ್ನು ನೆಲದ ಮೇಲಿಟ್ಟ, ಆ ಪಾದ ಬ್ರಹ್ಮಾಂಡದ ಮೇಲೆ ಪೂರ್ಣ ಭೂಮಿಯನ್ನೇ ಆವರಿಸಿತು. ಎರಡನೆಯ ಪಾದ ಎಲ್ಲಿಡಲಿ ಎಂದು ಕೇಳಿದ. ಗಾಬರಿಯಾದ ಬಲಿ ಚಕ್ರವರ್ತಿ ಆಕಾಶದ ಮೇಲಿಡು ಎಂದ. ವಿಷ್ಣುವಿನ ಎರಡನೆ ಪಾದ ಇಡೀ ಆಕಾಶವನ್ನೇ ಆವರಿಸಿತು. ಹೂಂ ಮೂರನೆಯ ಪಾದ ಎಲ್ಲಿಡಲಿ ಎಂದ. ಅದಕ್ಕಾಗಿಯೇ ಮೊದಲೇ ಮಸಲತ್ತು ಮಾಡಿಕೊಂಡು ಬಂದ ವಿಷ್ಣು, ತನ್ನ ಮೂರನೆಯ ಪಾದವನ್ನು ಅವನ ತಲೆಯ ಮೇಲಿಟ್ಟ ಅವನನ್ನು ಪಾತಾಳಕ್ಕೆ ಮೆಟ್ಟಿ ಕೊಂಉ ಹಾಕಿದನು.

ಐದನೆಯದಾಗಿ ವಾಮನ ಅವತಾರತಾಳಿದ ವಿಷ್ಣು, ಬಾಲಕನ ರೂಪದಲ್ಲಿ ಬಂದು ಕೇಳಿದ ವರವನ್ನು ಕೊಡುವ ಬಲಿಚಕ್ರವರ್ತಿಯ ಗರ್ವವನ್ನು ಮುರಿಯಲು ಬಲಿಚಕ್ರವರ್ತಿಗೆ ಕೇವಲ ಮೂರುಪಾದ ಜಾಗಕೊಡು ಎಂದು ಕೇಳಿದ ವಾಮನ ಒಂದು ಕಾಲು ಆಕಾಶಕ್ಕೆ ಮತ್ತೊಂದು ಕಾಲು ಭೂಮಿಗೆ ಇಡುತ್ತಾನೆ. ಇಲ್ಲಿ ವಾಮವಿಗೆ ಮೈಬಣ್ಣವಾಗಿ ನೀಲಿ ವರ್ಣ ಹಚ್ಚಲಾಗಿದೆ. ತಿಳುಗುಲಾಬಿ ವರ್ಣದ ಪಂಚೆಯೊಂದಿಗೆ ಹಳದಿ ಛತ್ರಿ, ಕಮಂಡ ಹಿಡಿದಿದ್ದಾನೆ. ಆಭರಣಧಾರಿಯಾದ ವಾಮನ ಕಾಲುಗಳು ಅಸ್ಪಷ್ಟವಾಗಿ ಕಾಣಬರುತ್ತೇವೆ. ಇಲ್ಲಿ ವಾಮನನ ಕಣ್ಣು ಮೀನಿನ ಹಾಗೆ ರಚನೆಯಾಗಿದ್ದು ಕಿವಿಯಲ್ಲಿಯ ಓಲೆಯೂ ಬೃಹದ್ದಾಕಾರವಾಗಿದೆ. ಈ ವಾಮನನ ಅಕ್ಕ ಪಕ್ಕದಲ್ಲಿ ಗಿಡದ ಟೊಂಗೆಗಳನ್ನು ಸೃಷ್ಟಿ ದಟ್ಟ-ಹಸಿರು ಎಲೆ, ಕೆಂಪು ಹೂಗಳು

ಒಟ್ಟು ಚಿತ್ರಕ್ಕೆ ಪೂರಕವಾಗಿ ಬಂದು ಚಿತ್ರಕ್ಕೆ ಒಂದು ವಿಶಿಷ್ಟ ರೂಪವನ್ನು ನೀಡಿದೆ. ಸಂಯೋಜನೆ, ವರ್ಣಗಾರಿಕೆ, ರೇಖಾಲಾಲಿತ್ಯಗಳ ಹಿತಮಿತ ಸಂಬಂಧದಿಂದ ಚಿತ್ರ ವಿನ್ಯಾಸ ಗೊಂಡಿದೆ.

**ಪರುಶುರಾಮನ ಅವತಾರ ಚಿತ್ರ-೬**

ಜಮದಗ್ನಿ ಋಷಿಗೆ ಯಲ್ಲಮ್ಮ ಮಡದಿಯಾಗಿದ್ದಳು. ಪರಶುರಾಮ ಈ ದಂಪತಿಗಳ ಹಿರೇಮಗನು. ಯಲ್ಲಮ್ಮ ಒಮ್ಮೆ ಚಿತ್ರಸೇನನೆಂಬ ಗಂಧರ್ವನಲ್ಲಿ ಮೋಹಗೊಂಡಳು. ಎರಡನೆಯ ಸಲ ಕಾರ್ತವೀರನೆಂಬ ಕ್ಷತ್ರಿಯ ರಾಜನಲ್ಲಿ ಮೋಹಗೊಂಡಳು. ಇದರಿಂದ ಕುಪಿತನಾದ ಜಮದಗ್ನಿ, ಪರಶುರಾಮನಿಗೆ, ಅವಳ ಶಿರಚ್ಛೇದನ ಮಾಡಲು ಆಜ್ಞಾಪಿಸಿದನು. ಹಾಗೂ ಹೀಗೂ ಅಳಿದುಳಿದ ಯಲ್ಲಮ್ಮ, ಅಸ್ಪೃಶ್ಯರ ಕೇರಿ ಸೇರಿದಳು. ಇತ್ತ ಪರಶುರಾಮ ತನ್ನ ತಾಯಿಯ ಅಧೋಗತಿಗೆ ಕಾರಣನಾದ ಆ ಕಾರ್ತವೀರನ ಕ್ಷತ್ರೀಯ ವಂಶವನ್ನೇ ನಷ್ಟಮಾಡಲು ಪಣತೊಟ್ಟ, ಕಾರ್ತವೀರನ ಮಕ್ಕಳು ಜಮದಗ್ನಿಯ ಕೊಲೆ ಮಾಡಿದರು. ತತ್ಪರಿಣಾಮ "ಚಪ್ಪುಕೊಡ್ಲಿ" ಎತ್ತಿದ ಪರಶುರಾಮ ಅನೇಕ ಜನ ಕ್ಷತ್ರಿಯರನ್ನು ಕೊಂದು ಹಾಕಿದನು. ಇದು ತನ್ನ ಆರನೆಯ ಅವತಾರದಲ್ಲಿ ವಿಷ್ಣು ಭಗವಂತ ಮಾಡಿದ ಘನಕಾರ್ಯವು!!

ಆರನೆಯ ಅವತಾರವಾಗಿ ವಿಷ್ಣು ಪರಶುರಾಮನಾಗಿ ಪರಿವರ್ತನೆಗೊಂಡ. ಇಲ್ಲಿ ಪರಶುರಾಮನ ಕೈಯಲ್ಲಿ ಕೊಡಲಿಯನ್ನು ಹಿಂಭಾಗದಲ್ಲಿ ಬಿಲ್ಲಿನ ಹಾಗೆ ಬಾಗಿದ ಕೋಲನ್ನು ರಚಿಸಿ ಚಿತ್ರಕ್ಕೆ ಸಮತೋಲನವನ್ನು ತರಲಾಗಿದೆ. ಕಿರೀಟಾಭರಣಧಾರಿಯಾದ ಪರಶುರಾಮ ಗಿಳಿಹಸಿರು ವಸ್ತ್ರವನ್ನು ತನ್ನ ಶರೀರದ ಎಲ್ಲಾ ಭಾಗದಲ್ಲಿ ನಡುವಿನಿಂದ ಮೇಲೆ ಮತ್ತೆ ಕೆಳಗೆ ಇಳಿಬಿದ್ದಿರುವುದು ಕಂಡು ಬರುತ್ತದೆ. ಹಳದಿ ಪಂಚೆಯೊಂದಿಗೆ ಎಡಗಾಲನ್ನು ಭಾಗಿಸಿ ನಿಂತಿರುವ ಚಿತ್ರವಿಲ್ಲಿದೆ. ಇಲ್ಲಿ ಪರಶುರಾಮನ ಮೂಗು ಚೂಪಾಗಿ ಚಿತ್ರಿಸಿದ್ದು ಕಣ್ಣು ಮೀನಿನ ಹಾಗೆ ಗೋಚರಿಸುತ್ತೇವೆ. ಅಕ್ಕ ಪಕ್ಕದಲ್ಲಿ ಗಿಡದ ಟೊಂಗೆಯನ್ನು ರಚಿಸಿದ್ದು ದಟ್ಟ ಹಸಿರು ಎಲೆಗಳು ಮತ್ತು ಕೆಂಪು ಬಣ್ಣದ ಹೂಗಳನ್ನು ಅಲ್ಲಲ್ಲಿ ರಚಿಸಿ ಚಿತ್ರದ ವಿನ್ಯಾಸವನ್ನು ಕಲಾತ್ಮಕಗೊಳಿಸಲಾಗಿದೆ. ಇಲ್ಲಿಯೂ ಸಹ ಕಾಗದವೂ ಕಿತ್ತುಬರುವುದು ಕಂಡುಬರುತ್ತದೆ. ಇಲ್ಲಿ ಚಿತ್ರ ಲಕ್ಷಣಗಳಾದ ಷಡಂಗಗಳನ್ನು ಅನುಸರಿಸಲಾಗಿದೆ. ಅದರಲ್ಲಿ ಸಮತೋಲನದ ತತ್ವವು ಇಲ್ಲಿ ಬಳಕೆಯಾಗಿದೆ.

**ರಾಮಾವತಾರ ಚಿತ್ರ-೭**

ದಶರಥ ರಾಜನಿಗೆ ಮೂರು ಜನ ಹೆಂಡರು. ರಾಮ ಹಿರೇಮಡಿದಿಯಾದ ಕೌಶಲ್ಯೆಯ ಮಗ..ಕಿರ್ರಿಯ ಹೆಂಡತಿಯ ಒತ್ತಾಯಕ್ಕೆ ಮಣಿದು, ಹಿರ್ರೇಹೆಂಡತಿಯ ಮಗನಾದ ರಾಮನನ್ನು, ದಶರಥ ರಾಜ ೧೪ ವರುಷ ಅರಮನೆಯಿಂದ ಹೊರಹಾಕಿದ! ರಾಮ ತರುಣ ಹೆಂಡತಿಯನ್ನು ಕಟ್ಟಿಕೊಂಡು ಅರಣ್ಯ ಸೇರಿದ. ಅಲ್ಲಿ ರಾಮ ಮತ್ತು ಅವನ ಸಹೋದರ ಲಕ್ಷ್ಮಣ ಕೂಡಿ, ಸೀತಾ

ಸ್ವಯಂವರದಲ್ಲಿ ಪಾಲ್ಗೊಂಡ ರಾವಣನ ತಂಗಿ ಸೂರ್ಪನಖಿಯ ಮೊಲೆ ಮೂಗು ಕೊಯ್ದರು. ತತ್ಪರಿಣಾಮ ರಾವಣ ಸೀತೆಯನ್ನು ಅಪಹರಿಸಿಕೊಂಡು ಹೋದ. ರಾಮ ಗೋಳಾಡುವುದನ್ನು ಕಂಡ ಅಲ್ಲಿನ ಕಾಡು ಜನರು, ರಾವಣನೊಡನೆ ಹೋರಾಡಿ, ಸೀತೆಯನ್ನು ಪುನಃ ರಾಮನಿಗೆ ಸಿಗುವಂತೆ ಮಾಡಿದರು. ಆದರೆ ಅವಳ ಶೀಲದ ಬಗ್ಗೆ ಸಂಶಯಪಟ್ಟ ರಾಮ, ಸೀತೆಯನ್ನು ಮತ್ತೆ ಅಡವಿಗಟ್ಟಿದ! ವಾಲ್ಮೀಕಿ ಎಂಬ ಋಷಿ, ರಾಮ ಮತ್ತು ಸೀತೆ ಇಬ್ಬರಿಗೂ ಬುದ್ಧಿ ಹೇಳಿ ಮತ್ತೆ ಕೂಡಿಸಿದ. ಇದು ಒಬ್ಬ ಮಾಮೂಲಿ ರಾಜನ ಕಥೆ. ಆದಾಗ್ಯೂ ಈ ರಾಮ ಆ ವಿಷ್ಣುವಿನ ೭ನೆಯ ಅವತಾರಿಯೆಂದೂ, ಸೀತೆ ಲಕ್ಷ್ಮಿಯ ಅವತಾರಿಯೆಂದೂ, ಅದಕ್ಕೆ ದೈವೀ ಬಣ್ಣ ಬಳಿದು ಇದಕ್ಕೆ ಧರ್ಮ ಗ್ರಂಥವನ್ನಾಗಿ ಮಾಡಿದ್ದಾರೆ!

ಏಳನೆಯ ಅವತಾರವಾಗಿ ವಿಷ್ಣು ರಾಮಾವತಾರ ತಾಳುತ್ತಾನೆ. ಇಲ್ಲಿ ರಾಮನ ಚಿತ್ರ ರಚನೆಯಾಗಿದ್ದು ನೀಲಿಮೈಬಣ್ಣ ಹೊಂದಲಾಗಿದೆ. ಆಭರಣ ಕಿರೀಟಧಾರಿಯಾದ ರಾಮನಿಗೆ ಹಣೆಯ ನಾಮವಾಗಿ ಬಿಳಿ ಮಿಶ್ರಿತ ಹಳದಿ ವರ್ಣ ಬಳಸಲಾಗಿದೆ. ಮೀನಿನಾಕಾರದ ಕಣ್ಣುಗಳು ಬಾಗಿದ ಹುಬ್ಬು ಕೆಂಪು ತುಟಿ ಹಳದಿ ಪಂಚೆಧರಿಸಿದ್ದಾನೆ. ಎಡಗೈಯಲ್ಲಿ ಬಿಲ್ಲು ಹಿಡಿದು ಬಲಗೈಯಲ್ಲಿ ಭಾಣಹಿಡಿದಿರುವ ಹಾಗೆ ಕಂಡುಬರುತ್ತದೆ. ಇಲ್ಲಿ ರಾಮನು ಗಿಡದ ಟೊಂಗೆಯ ಮದ್ಯನಿಂತಿದ್ದು ತ್ರಿಭಂಗಿಯಲ್ಲಿ ನಿಂತಿರುವ ಭಂಗಿಯಲ್ಲಿದೆ. ಗಿಡದ ಟೊಂಗೆಗೆ ದಟ್ಟ ಹಸಿರು ವರ್ಣ ಬಳಸಿದ್ದು ಮತ್ತು ಹೂಗಳನ್ನು ಕೆಂಪು ವರ್ಣದಿಂದ ಚಿತ್ರಿಸಲಾಗಿದೆ. ನಗುಮುಖದಲ್ಲಿ ಕಂಡುಬರುವ ಈ ರಾಮನ ಚಿತ್ರವು ಬಿಳಿಮಿಶ್ರಿತ ಹಳದಿ ಹಿನ್ನೆಲೆಯಲ್ಲಿ ರಚಿಸಲಾಗಿದೆ.

### ಕೃಷ್ಣಾವತಾರ ಚಿತ್ರ-೮

ಕೃಷ್ಣ, ದೇವಕಿ ಮತ್ತು ವಸುದೇವರ ಮಗನಾಗಿದ್ದಾನೆ. ಇವನೊಬ್ಬ ಚಾಣಾಕ್ಷ ರಾಜಕಾರಣಿ, ಸಮಯ ಸಾಧಿಸಿ ಸೇಡು ತೀರಿಸಿಕೊಳ್ಳುವ ಪುಂಡ, ರಸಿಕ ಜೀವಿ. ಹಸ್ತಿನಾಪುರದ ರಾಜ್ಯದ ಪಾಲಿಗಾಗಿ, ದಾಯಾದಿಗಳಲ್ಲಿ ಹಗೆತನ ಬೆಳೆಯುವಂತೆ ಮಾಡಿದ ಧೂರ್ತ. ಪಾಂಡವ ಧೃತರಾಷ್ಟ್ರನ ತಮ್ಮ, ಕೌರವ ಧೃತರಾಷ್ಟ್ರನ ಮಗ. ಹಿಂದೂ ಧರ್ಮದ ವಾರ್ಸಾ ಹಕ್ಕಿನ ಪ್ರಕಾರ, ಕೌರವನೇ ರಾಜ್ಯಕ್ಕೆ ಸಂಪೂರ್ಣ ಹಕ್ಕುದಾರ, ಕೃಷ್ಣನ ಪಟ್ಟದರಸಿ ರುಕ್ಮಿಣಿ, ವಿದರ್ಭ ದೇಶದ ರಾಜನಾದ ಭೀಷಕನ ಮಗಳು, ಅವಳನ್ನು ಮೊದಲು ಕೌರವನ ತಮ್ಮನಾದ ಶಿಶುಪಾಲನಿಗೆ ಲಗ್ನ ಮಾಡಿ ಕೊಟ್ಟಿತ್ತು. ಅವನಿಂದ ಅವಳನ್ನು ಅಪಹರಿಸಿ ತಾನು ಮಾಡಿಕೊಂಡ. ದುರ್ಯೋಧನನ ಮಗಳಾದ ಲಕ್ಷ್ಮಣಿಯನ್ನು, ಕೃಷ್ಣನ ಮಗ ಸಾಂಬ, ಓಡಿಸಿಕೊಂಡು ಹೋಗಲು ಬಂದನು. ಬಲರಾಮನ ಮಗಳಾದ ವತ್ಸಲಾಳನ್ನು ದುರ್ಯೋಧನನ ಮಗನಾದ ಲಕ್ಷಣನಿಗೆ ಕೊಟ್ಟಿತ್ತು. ಲಗ್ನದ ಸಮಯದಲ್ಲಿ, ಕೃಷ್ಣ ಅವಳನ್ನು ಅಪಹರಿಸಿ, ತನ್ನ ಸೋದರಳಿಯ ಅಭಿಮನ್ಯುವಿಗೆ

ಕೊಟ್ಟನು. ಕೃಷ್ಣನ ತಂಗಿ ಸುಭದ್ರೆಯನ್ನು ಅರ್ಜುನನಿಗೆ ಕೊಟ್ಟನು. ಹೀಗೆ ಇಂಥ ಇನ್ನೂ ಅನೇಕ ಕಾರಣಗಳಿಂದಾಗಿ, ತನ್ನ ಜೀಗರಾದ ಪಾಂಡವರ ಬೆನ್ನು ಕಟ್ಟಿ ಕೌರವರಿಗೆ ಕಡುವೈರಿಯಾಗಿ ನಿಂತ.

ಇಲ್ಲಿ ಕೃಷ್ಣನು ಚಿಕ್ಕ ಬಾಲಕನಾಗಿದ್ದು ಸುಂದರ ವಿನ್ಯಾಸದ ಕಿರೀಟ ಧರಿಸಿದ್ದಾನೆ. ಕೈ ಕಾಲುಗಳಲ್ಲಿ ಮತ್ತು ಕೊರಳಲ್ಲಿ ಆಭರಣಗಳು ಕಂಡುಬರುತ್ತದೆ. ಹಾಗೆ ಕಿವಿಯಲ್ಲಿಯೂ ಸಹ ರಿಂಗಿನಾಕಾರದ ಕಿವಿಯೋಲೆಯು ಕಂಡುಬರುತ್ತದೆ. ಕೃಷ್ಣನು ಒಂದು ಕಾಲು ಮುಂದೆ ಒಂದು ಕಾಲು ಹಿಂದೆ ಇಟ್ಟು ಬಲಗೈಯನ್ನು ನೆಲಕ್ಕೆ ಊರಿ ಎಡಗೈಯಲ್ಲಿ ಲಾಡು ಹಿಡಿದಿರುವ ಹಾಗೆ ಮೂಡಿಬಂದಿದೆ. ಈ ಕೃಷ್ಣನು ಬೃಹತ್ತಾದ ಕಂಭಗಳುಳ್ಳ ಮಂಟಪದ ಮಧ್ಯದಲ್ಲಿ ಚಿತ್ರಿಸಲ್ಪಟ್ಟಿದ್ದಾನೆ. ಮಂಟಪವು. ತಿಳುಮಿಶ್ರಿತ ಹಳದಿ ವರ್ಣದಿಂದ ಕೂಡಿದೆ. ಕಂಭಗಳಲ್ಲಿ ಕಮಲ ಪುಷ್ಪ, ಹಾಗೂ ದಳದ ಹಾಗೆ ರೇಖಾ ವಿನ್ಯಾಸಗಳು ಮೂಡಿವೆ. ಮೇಲ್ಭಾಗದಲ್ಲಿ ಅಡ್ಡ ಪಟ್ಟಿಕೆಯನ್ನು ರಚಿಸಿ ರೇಖೆಯಿಂದ ಎಲೆಯಾಕಾರದ, ಅಮಾನು, ಕಿಡಕಿಗಳಲ್ಲಿ ಚಿಕ್ಕ ಚಿಕ್ಕ ಹೂಗಳನ್ನು ಹಳದಿ ಮಿಶ್ರಿತ ಕಪ್ಪು ವರ್ಣದಿಂದ ರಚಿಸಲಾಗಿದೆ. ಒಟ್ಟಾರೆಯಾಗಿ ಈ ಕಲಾಕೃತಿಯು ದಟ್ಟ ನೀಲಿವರ್ಣದ ಮೇಲೆ ರಚಿಸಲಾಗಿದೆ. ಇಲ್ಲಿ ಕೃಷ್ಣನಿಗೆ ನೇರಳಿವರ್ಣ ಹಾಗೂ ಕಪ್ಪು ನೀಲಿವರ್ಣದಿಂದ ಹೊರ ರೇಖೆಯನ್ನು ಎಳೆಯಲಾಗಿದೆ.

### ಬುದ್ಧಾವತಾರ ಚಿತ್ರ-೯

ಭಗವಾನ್ ಬುದ್ಧ, ಸಿದ್ಧೋದನ ಮತ್ತು ಮಾಯಾದೇವಿ ರಾಜ ದಂಪತಿಗಳಲ್ಲಿ ಹುಟ್ಟಿದನು. ಧರ್ಮಕ್ಕಾಗಿ ರಾಜ್ಯವನ್ನೂ ಸಿಂಹಾಸನವನ್ನೂ ತ್ಯಜಿಸಿ, ದಿವ್ಯ ಜ್ಞಾನ ಸಂಪಾದನೆಯನ್ನು ಮಾಡಿಕೊಂಡು, ಬೌದ್ಧ ಧರ್ಮವನ್ನು ಸ್ಥಾಪಿಸಿದನು. ಇವನ ಧರ್ಮ ವಿಶ್ವಧರ್ಮಗಳಲ್ಲಿ ಒಂದಾಗಿದೆ. ಜಗತ್ತಿನ ಎಲ್ಲ ಸತ್ಪುರುಷರನ್ನೂ, ಧರ್ಮ ಸ್ಥಾಪಕರನ್ನೂ, ತಕ್ಕಡಿಯ ಒಂದು ಪರಡಿಯಲ್ಲಿ ಕೂಡ್ರಿಸಿ, ಬುದ್ಧನನ್ನು ಮತ್ತೊಂದು ಪರಡಿಯಲ್ಲಿ ಕೂಡ್ರಿಸಿದರೆ ಬುದ್ಧನೇ ಹೆಚ್ಚು ತೂಗುತ್ತಾನೆ. ಅದರಂತೆ ಜಗತ್ತಿನ ಎಲ್ಲ ಧರ್ಮಗಳನ್ನೂ ಒಂದು ಪರಡಿಯಲ್ಲಿ ಹಾಕಿ, ಭೌದ್ಧ ಧರ್ಮವನ್ನು ಮತ್ತೊಂದು ಪರಡಿಯಲ್ಲಿ ಹಾಕಿದರೆ, ಭೌದ್ಧ ಧರ್ಮವೇ ಹೆಚ್ಚು ತೂಗುವುದು. ಬುದ್ಧ ಅಷ್ಟೊಂದು ಶ್ರೇಷ್ಠನಾಗಿದ್ದಾನೆ. ಭೌದ್ಧಧರ್ಮ ಅಷ್ಟೊಂದು ಘನವಾಗಿದೆ.

ಒಂಭತ್ತನೆಯ ಅವತಾರವಾಗಿ ವಿಷ್ಣು ಬೌದ್ಧವತಾರ ತಾಳಿದ ಚಿತ್ರವಿಲ್ಲಿದೆ. ಇಲ್ಲಿ ಬುದ್ಧನು ಎದುರು ನೋಟದೊಂದಿಗೆ ಕುಳಿತಿದ್ದು ನೀಲಿ ಮೈಬಣ್ಣಲ್ಲಿ ಚಿತ್ರತವ್ವಾಗಿದ್ದಾನೆ. ಕಿರೀಟ ಆಭರಣಧಾರಿಯಾದ ಬುದ್ಧನ ಕತ್ತಿನಿಂದ ಕೆಂಪು ವರ್ಣದ ವಸ್ತ್ರವು ತೊಡೆಯವರೆಗೆ ಇಳಿಬಿದ್ದಿದೆ. ಮತ್ತು ಹಳದಿ ವರ್ಣದ ಪಂಚೆಧರಿಸಿದ್ದಾನೆ. ಈ ಪಂಚೆಯಲ್ಲಿ ಕೆಂಪುವರ್ಣದ ರೇಖೆಗಳು

ರಚನೆಯಾಗಿವೆ. ಇಲ್ಲಿ ಬುದ್ಧನು ತನ್ನ ಎರಡು ಕೈಗಳನ್ನು ಮುಂದೆಚಾಚಿ ನಗುಮುಖದಲ್ಲಿದ್ದಾನೆ. ಕಣ್ಣುಗಳು ಉದ್ದವಾಗಿ ಮೂಡಿಬಂದು ತುಟಿಗಳಿಗೆ ಕೆಂಪು ವರ್ಣ ಬಳೆಯಲಾಗಿದೆ. ಹಣೆಯ ನಾಮವಾಗಿ ಹಳದಿಮಿಶ್ರಿತ ವರ್ಣ ಉಪಯೋಗಿಸಲಾಗಿದೆ. ಹಾಗೇ ಹೊರರೇಖೆಯಾಗಿ ಕಪ್ಪು ವರ್ಣವನ್ನು ಬಳಸಲಾಗಿದೆ. ಬುದ್ಧನ ಅಕ್ಕ ಪಕ್ಕದಲ್ಲಿ ಗಿಡದ ಟೊಂಗೆಯನ್ನು ರಚಿಸಿ ಅದರಲ್ಲಿ ದಟ್ಟ ಹಸಿರು ವರ್ಣದ ಎಲೆಯನ್ನು ಹಾಗೂ ಕೆಂಪು ಹೂಗಳು ಮೂಡಿಬಂದಿವೆ.

## ವಿಷ್ಣುವಿನ ಕಲ್ಕಿ ಅವತಾರ ಮತ್ತು ಬುದ್ಧಾವತಾರ ಚಿತ್ರ-೧೦

ಬೌದ್ಧಧರ್ಮ ಅನುಯಾಯಿಯಾದ ಸಾಮ್ರಾಟ ಅಶೋಕ ಸತ್ತ ಬಳಿಕ, ಅವನ ಬ್ರಾಹ್ಮಣ ಮಂತ್ರಿಯಾದ ಪುಷ್ಯಮಿತ್ರ ಎಂಬುವನು, ಅಶೋಕನ ಪುತ್ರನನ್ನು ತುಂಬಿದ ದರಬಾರದಲ್ಲಿ ಕೊಂದುಹಾಕಿ, ತನ್ನದೇ ಆದ ಶುಂಗವಂಶದ ರಾಜ್ಯವನ್ನು ಸ್ಥಾಪಿಸಿದನು. ಇವನು ಬೌದ್ಧ ಭಿಕ್ಷುಗಳ ತಲೆಗಳನ್ನು ಕೊಯ್ದು ತಂದವರಿಗೆ ಪಾರಿತೋಷಕಗಳನ್ನು ಕೊಟ್ಟನು! ಇದು ಬೌದ್ಧ ಧರ್ಮ ಭಾರತ ದೇಶದಿಂದ ಸಂಪೂರ್ಣವಾಗಿ ಉಚ್ಚಾಟನೆಯಾಗಲೂ ಕಾರಣವಾಯಿತು!

ಶ್ರೀ ಜಿ.ಎಸ್.ಸರದೇಸಾಯಿಯವರು ಬರೆದ "ಭಾರತೀಯ ತತ್ವಜ್ಞಾನ" –ಎಂಬ ಗ್ರಂಥದ ಕನ್ನಡ ಅನುವಾದ, ಶ್ರೀ ಗೌರೀಶ ಕಾಯ್ಕಿಣಿಯವರು ಮಾಡಿದ್ದು, ಅದರ ಪುಟ-೧೯೯ರಲ್ಲಿ "ಶ್ರೀ ಶಂಕರಾಚಾರ್ಯರ ತೀಕ್ಷ್ಣ ಹಾಗೂ ಅಪಾರ ಮೇಧಾವಿತನವೂ, ಅದ್ಭುತ ಕಾರ್ಯಕ್ರಮತೆಯೂ, ಭಾರತದ ಇತಿಹಾಸದಲ್ಲೊಂದು ದೊಡ್ಡ ದುರಂತವು" ಎಂದು ಬರೆದಿದ್ದಾರೆ. ಇದನ್ನು ಯಾಕೆ ಹೇಳಿದ್ದಾರೆಂದರೆ ಜಾತ್ಯತೀಯವಾದ ಬೌದ್ಧ ಧರ್ಮದ ಪ್ರಭಾವದಿಂದ, ಉಚ್ಚ ನೀಚ ಎಂಬ, ಚಾತುವರ್ಣ ಜಾತಿ ಪದ್ಧತಿಯ ಅನಿಷ್ಟ ಕಟ್ಟು, ಕಹಳೇ ಸಡಿಲುಗೊಂಡಿತ್ತು. ಆದರೆ ಶಂಕರಾಚಾರ್ಯರು, ಆ ಅರಿಷ್ಟ ಜಾತಿಪದ್ಧತಿಯನ್ನು ಮನುಸ್ಮೃತಿಯ ಪ್ರಕಾರ ಭದ್ರಪಡಿಸಿದರು.

ಇದು ವಿಷ್ಣುವಿನ ಕೊನೆಯ ಅವತಾರವಾಗಿದೆ. ಇಲ್ಲಿ ವಿಷ್ಣು ಮತ್ತು ಬಿಳಿ ಕುದುರೆಯ ರಚನೆ ಇದೆ. ಅಲ್ಲದೆ ಕುದುರೆಗೆ ಎಡ ಮತ್ತು ಬಲಭಾಗದಲ್ಲಿ ಹಳದಿವರ್ಣದ ರೆಕ್ಕೆಯನ್ನು ರಚಿಸಿದ್ದಾರೆ ಹಾಗೂ ರಥದ ಕಲ್ಪನೆಯ ಹಾಗೇ ಮೇಲ್ಭಾಗದಲ್ಲಿ ಛತ್ರಿಯನ್ನು ರಚಿಸಿ ಹಳದಿ ವರ್ಣ ಬಳೆಯಲಾಗಿದೆ. ಇಲ್ಲಿ ವಿಷ್ಣು ಕೆಳಭಾಗದಲ್ಲಿ ಇದ್ದು ಒಂದುಕಾಲು ಮೇಲಕ್ಕೆ ಎತ್ತಿ ಮತ್ತೊಂದು ಕಾಲು ಕೆಳಕ್ಕೆ ಊರಿದ್ದಾನೆ. ಕಿರೀಟಾಭರಣಧಾರಿಯಾದ ವಿಷ್ಣು ಕುದುರೆಯ ಧಾರವನ್ನು ಜಗ್ಗುತ್ತಿರುವುದು ಕಂಡುಬರುತ್ತದೆ. ಇಲ್ಲಿಯೂ ಸಹ ವಿಷ್ಣುವಿನ ಮೈಬಣ್ಣ ನೀಲಿ ಹಾಗೂ ಹಳದಿ ಪಂಚೆಯನ್ನು ರಚಿಸಿದ್ದಾನೆ, ಬಿಳಿಕುದುರೆಯ ಕ್ಲಾಲುಗಳಿಗೆ ತಿಳು ನೀಲಿ ಬಣ್ಣ ಉಪಯೋಗಿಸಿದ್ದು ಅಲ್ಲದೇ ಪಕ್ಕದಲ್ಲಿ ಸಹ ಗಿಡದ ಟೊಂಗೆಯನ್ನು ರಚಿಸಿ ದಟ್ಟ ಹಸಿರು ವರ್ಣದಿಂದ ಎಲೆ ಹೂಗಳನ್ನು ನಿರ್ಮಿಸಿದ್ದಾರೆ. ಈ ಚಿತ್ರದ ಕೆಳಭಾಗದಲ್ಲಿ ಬೌದ್ಧಾವತಾರದ

ಚಿತ್ರವಿದ್ದು ಹಿಂದೆ ಹೇಳಿದ ಚಿತ್ರದ ಹಾಗೇ ರಚನೆಯಾಗಿದೆ. ನೆರಳು ಬೆಳಕನ್ನು ವರ್ಣಛಾಯೆಯಲ್ಲಿ ನಿರೂಪಿಸಲಾಗಿದೆ. ಸಂಯೋಜನೆ ಮತ್ತು ಯಥಾದರ್ಶನದ ಹಿನ್ನೆಲೆ ಈ ಚಿತ್ರಕ್ಕೆ ಇದೆ. ಒಟ್ಟಾರೆ ಈ ಹತ್ತು ದಶಾವತಾರಗಳಲ್ಲಿ ಗಿಡದ ಟೊಂಗೆಯನ್ನು ಮೂಡಿಸಿರುವುದು ಮತ್ತು ಬಿಳಿ ಮಿಶ್ರಿತ ಹಿನ್ನೆಲೆಯ ಮೇಲೆ ಎಲ್ಲಾ ದಶಾವತಾರದ ಚಿತ್ರಗಳು ರಚನೆಯಾಗಿವೆ.

ದಶಾವತಾರದ ಎಲ್ಲಾ ಚಿತ್ರಗಳಲ್ಲಿ ವರ್ಣವಿನ್ಯಾಸ ಸಾಂದರ್ಭಿಕವಾಗಿ ಬಳಕೆಯಾಗಿದೆ. ಚಿತ್ರಗಳಲ್ಲಿ ಪ್ರಧಾನ ಪಾತ್ರಕ್ಕೆ ಮೊದಲ ಪ್ರಾಶಸ್ತ್ಯವಿದ್ದು, ನಂತರದ ಪಾತ್ರಗಳು ಪೂರಕವಾಗಿ ಬಳಕೆಗೊಂಡಿವೆ. ಪ್ರಕರತೆಯನ್ನು ಕೃಷ್ಣನ ಅವತಾರದ ಪಾತ್ರಗಳಿಗೆ ನೀಡಲಾಗಿದೆ. ಮತ್ತು ಈ ಚಿತ್ರವನ್ನು ದೊಡ್ಡದಾಗಿ ಚಿತ್ರಿಸಿ ಗಮನ ಸೆಳೆಯುವಂತೆ ಮಾಡಲಾಗಿದೆ.

ವಿಶೇಷವೆಂದರೆ ಚಿತ್ರಕ್ಕೆ ತಕ್ಕದಾದ ಹಿನ್ನೆಲೆಯನ್ನು ಒದಗಿಸಿರುವುದು ಗಮನಾರ್ಹ, ಚಿತ್ರದ ಸಂಯೋಜನೆಗೆ ತೊಂದರೆಯಾಗದಂತೆ ವರ್ಣವಿನ್ಯಾಸ ನಿಸರ್ಗದ ಇಲ್ಲವೇ ವಸ್ತುವಿನ ವಿನ್ಯಾಸಗಳನ್ನು ತುಂಬಾ ಕಲಾತ್ಮಕತೆಯಿಂದ ಚಿತ್ರಿಸಲಾಗಿದೆ. ಚಿತ್ರಕ್ಕೆ ತಕ್ಕಂತೆ ರಸಿಕತೆಯ ಅಂಶಗಳು ಮನೋಜ್ಞವಾಗಿ ಮೂಡಿಬಂದಿವೆ.




೧. ವಿಷ್ಣುವಿನ ದಶಾವತಾರದ ಚಿತ್ರ







ನಾರಸಿಂಹಾವತಾರ-ಪ್ರಹ್ಲಾದ



ವರಹಾವತಾರ



ರಾಮಾವತಾರ-ಸೀತಾ



ವಾಮನಾವತಾರ–ಬಲಿ–ಶುಕ್ರಾಚಾರ್ಯ



ಪರಶುರಾಮಾವತಾರ



ಕೃಷ್ಣಾವತಾರ

## ಕಲಾವಿದ ಸಂತ ಋಭರಾಯರ ದಶಾವತಾರದ ಚಿತ್ರಗಳು



ವಿಷ್ಣುವಿನ ಚಿತ್ರ



ಚಿತ್ರ-೧-೨



ಚಿತ್ರ-೩-೪



ಚಿತ್ರ-೫



ಚಿತ್ರ-೬

## ಅಧ್ಯಾಯ ೭

# ಮರ ಮಾಧ್ಯಮದ ದಶಾವತಾರದ ಚಿತ್ರಗಳು

### ಮರ ಮಾಧ್ಯಮದ ಹಿನ್ನೆಲೆ

ಮರದ ಬಳಕೆಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಅತ್ಯಂತ ಪ್ರಾಚೀನ ಕುರುಹುಗಳಾದ ಬಳ್ಳಾರಿ ಜಿಲ್ಲೆಯಲ್ಲಿಯ ಲಭ್ಯವಿದೆ. ಜಿಲ್ಲೆಯ ತೆಕ್ಕಲುಕೋಟೆ ಮತ್ತು ಸಂಗನಕಲ್ಲುಗಳಲ್ಲಿ ನಡೆದ ಪುರಾತತ್ವ ಉತ್ಖನನದಿಂದ ನವ ಶಿಲಾಯುಗದ ಕಾಲದಲ್ಲಿ ವೃತ್ತಾಕಾರದ ವಾಸದ ಮನೆಗಳನ್ನು ಬಿದಿರಿನ ಕಂಬಗಳನ್ನು ಬಳಸಿ ನಿರ್ಮಿಸುತ್ತಿದ್ದ ಸಂಗತಿ ಬೆಳಕಿಗೆ ಬಂದಿದೆ. ಇದರ ಕಾಲ ಕ್ರಿ.ಪೂ. ೧೫೦೦ರಂದು ಇದು ಮನುಷ್ಯನ ತನ್ನ ನಿರ್ದಿಷ್ಟ ಉದ್ದೇಶವೊಂದಕ್ಕೆ ಮರವನ್ನು ಬಳಸಿಕೊಂಡ ಮೊದಲ ಉದಾಹರಣೆ ಎನ್ನಬಹುದು. ಮೇಗಾಸ್ತನಿಸ್ ತನ್ನ ಬರಹದಲ್ಲಿ ರಾಜಧಾನಿ ಪಾಲಿಭೋಥ್ರದ (ಪಾಟಲೀಪುತ್ರ) ಗೋಡೆಗಳಲ್ಲಿ ಮರದಿಂದ ನಿರ್ಮಿಸಲಾಗಿತ್ತೆಂದು ತಿಳಿಸುತ್ತಾನೆ. ಪಾಟಲೀಪುತ್ರ ಇಂದಿನ ವಿಹಾರದ ರಾಜಧಾನಿ ಪಟ್ನಾ ಆಗಿದ್ದು ಇಲ್ಲಿ ನೀಡದ ಉತ್ಖನಗಳು ಮೇಗಾಸ್ತನಿಸ್‌ನ ಹೇಳಿಕೆಯನ್ನು ಸಮರ್ಥಿಸಿವೆ.

ಇದು ಉನ್ಖನನದ ಸಂದರ್ಭದಲ್ಲಿ ಅರಮನೆಗೆ ಸಂಬಂಧಿಸಿದ ಮರದ ಅವಶೇಷಗಳು ದೊರೆತಿವೆ. ಒಟ್ಟಾರೆ ಭಾರತದಲ್ಲಿ ಕ್ರಿ.ಪೂ. ೪೦೦ರಲ್ಲಿ ಕಟ್ಟಡಗಳ ರಚನೆಗೆ ಮರವನ್ನು ಬಳಸುತ್ತಿದ್ದರೆಂದು ತಿಳಿದುಬರುತ್ತದೆ. ಮರ ಇಲ್ಲವೆ ಕಟ್ಟಿಗೆಯನ್ನುವ 'ದಿಮ್ಮೆ'ದಾರು ಎಂದು ಕರೆಯಲಾಗುತ್ತದೆ. ಮರ ಅಥವಾ ಕಟ್ಟಿಗೆ ಮಾನವನ ಬದುಕಿನ ಒಂದು ಭಾಗವೇ ಆಗಿದ್ದೆ.

---

**ಅಡಿಟಿಪ್ಪಣಿಗಳು**

ರವಿ ವಸಂತರಾವ್ ನಾಯಕ, ಕಿನ್ನಾಳ ಕಲೆ, ಪುಟ.೨೮

ಶಶಿಕಾಂತ ಬಸರಿಕಟ್ಟಿ, ಕಲಘಟಗಿ ಕಲೆ, ಪುಟ.೨೮

ಅದು ಹಲವು ವಿಧಗಳಲ್ಲಿ ಹಲವು ಉದ್ದೇಶಗಳಿಗಾಗಿ ಸಾವಿರಾರು ವರ್ಷಗಳಿಂದ ಬಳಸಲ್ಪಡುತ್ತದೆ. ಜನರಿಂದ ಮೊದಲ್ಗೊಂಡು ಮರಣದವರೆಗೆ ಅದು ಮನುಷ್ಯನಿಗೆ ಪ್ರಯೋಜನಕಾರಿ ತೊಟ್ಟಿಲು ಕಟ್ಟಿಗೆಯ ಮರದ ತೊಗಟೆ ಮನುಷ್ಯನ ಮೊದಲ ಉಡುಪಾಗಿತ್ತು ಭಾರತದಲ್ಲಿ ಕಟ್ಟಿಗೆಯ ಕಲಾತ್ಮಕವಾಗಿ ಬಳಕೆಯು ಸಿಂಧೂ ಸಂಸ್ಕೃತಿಯಷ್ಟು ಪ್ರಾಚೀನ ಆಗ ಮರದ ಕಂಬ, ತೊಲೆಗಳಿಂದ ಕಟ್ಟಿದ ರಚನೆಯಾಗುತ್ತಿತ್ತು. ವಿಷ್ಣುಧರ್ಮೋತ್ತರಗಳಲ್ಲಿ ಬಡಗಿ ಕಲೆಯ ಪ್ರಸ್ತಾಪವಿದೆ, ಮೌರ್ಯರ ಅರಮನೆಗಳು ಮರದಿಂದಲೇ ನಿರ್ಮಿತವಾದವುಗಳಾಗಿವೆ ಎಂದು ತಿಳಿಯಬಹುದಾಗಿದೆ.

ಹೀಗೆ ಮರದಲ್ಲಿ ಮೂರ್ತಿ ಶಿಲ್ಪ ಮತ್ತು ಚಿತ್ರಗಳನ್ನು ಮರದ ಮೇಲೆ ಬಳಸುವುದು ತೀರ ಹಳೆಯ ಪದ್ಧತಿಯೇ ಆಗಿದೆ, ದೇವತೆಗಳ ಪ್ರತೀಕವಾಗಿ ಪ್ರತಿಮೆಗಳನ್ನು ಕಂಡರಿಸುವುದು ಮಾನವನ ಸಂಸ್ಕೃತಿ ಮೊದಲಾದಗಲೇ ಕಾಣಿಸಿಕೊಳ್ಳತ್ತದೆ. ಆದರೆ ಅಷ್ಟು ಹಳೆಯ ಮರದ ಕಲಾಕೃತಿಗಳು ನಮ್ಮ ಕಾಲದವರೆಗೆ ಉಳಿದು ಬಂದಿಲ್ಲ. ಮರ ಬಹುಕಾಲ ಉಳಿಯಲಾರದು. ಗಾಳಿ ಮಳೆಗೆ ನಾಶವಾಗುತ್ತದೆ. ಹುಳುಕು ಹುಪ್ಪಟೆ ಹಿಡಿದು ಹಾಳಾಗುತ್ತದೆ. ಆದರೂ ಪ್ರಾಚೀನ ಸಂಸ್ಕೃತಿಯ ಮಾನವ ಕಲ್ಲಿನಲ್ಲಿ ಮೂಳೆಯಲ್ಲಿ ಕೆತ್ತಲು ಮೊದಲು ಮಾಡುವ ಪೂರ್ವದಲ್ಲಿ ಮರದಲ್ಲಿ ಕೆತ್ತನೆ ಕೆಲಸ ಆರಂಭವಾದುದು ಸಹಜವೇ ಮರದ ಕೆತ್ತನೆಗೆ ಬೇಕಾಗುವ ಉಳಿ ಮುಂತಾದವುಗಳನ್ನು ಅವನು ಕಲ್ಲಿನಲ್ಲೇ ಮಾಡಿಕೊಂಡಿದ್ದಕ್ಕೆ ನಿದರ್ಶನಗಳಿವೆ. ಬೇವಿನ ಮರದಿಂದ ಹಲಗೆ, ಕಂಬ, ಬಾಗಿಲು, ದ್ವಾರ, ತೊಲೆ, ಜಂತಿಗಳನ್ನು ಮಾಡಲಾಗುತ್ತದೆ, ಅಲ್ಲದೆ ಪಲ್ಲಕ್ಕಿ, ರಥಶಿಲ್ಪ ಮಂಟಪ ಮುಂತಾದವುಗಳನ್ನು ಸಹ ನಿರ್ಮಿಸಲಾಗುತ್ತದೆ. ಅಲ್ಲದೆ ಬೇವಿನ ಮರವನ್ನು ಆಟಿಕೆ ಸಾಮಾನುಗಳನ್ನು ಮಾಡಲು ಸಹ ಉಪಯೋಗಿಸುತ್ತಾ ಬಂದಿದ್ದಾರೆ. ತಾಳಿಕೆ, ಮತ್ತು ಬಾಳಿಕೆಯಲ್ಲಿ ಬೆಲೆ ಬಾಳುವ ಮರಗಳಷ್ಟೆ ಉತ್ಕೃಷ್ಟಗುಣವನ್ನು ಬೇವು ಹೊಂದಿದೆ.

ಮನುಷ್ಯ ತನ್ನ ಬದುಕನ್ನು ಸುಂದರವಾಗಿರಿಸಿಕೊಳ್ಳಲು ಅನೇಕ ಬಗೆಯ ಕಲೆಗಳನ್ನು ಸೃಷ್ಟಿಸಿಕೊಂಡು ಬಂದಿದ್ದಾನೆ. ತಾನು ದಿನನಿತ್ಯ ಉಪಯೋಗಿಸುವ ಅನೇಕ ಬಗೆಯ ವಸ್ತುಗಳ ಕಲೆಯನ್ನು ತುಂಬ ಸುಂದರಗೊಳಿಸಿದ್ದಾನೆ. ಕೆಲವು ವಸ್ತುಗಳನ್ನು ಚಿತ್ರಗಳಿಂದ ಅಲಂಕರಿಸಿದ್ದರೆ ಇನ್ನೂ ಕೆಲವು ವಸ್ತುಗಳನ್ನು ಶಿಲ್ಪಗಳು ಕೆತ್ತನಯಿಂದ ಸಾಲಂಕೃತಿಗೊಳಿಸಿದ್ದಾನೆ. ಎಂದು ಹೇಳಲಾಗಿದೆ. ಅದೇ ರೀತಿಯ ಜನಪದರು ಹೇಳುವ ಹಾಡಿನಲ್ಲೂ ಬೇವಿನ ಮರದ ಮಹತ್ವ ವ್ಯಕ್ತವಾಗುತ್ತದೆ. ಹೀಗೆ ಅತ್ಯಂತ ಮಹತ್ವ ಪಡೆದ ಮರದ ಮಾಧ್ಯಮದಲ್ಲಿ ನಮ್ಮ ಜನಪದರು ರಚಿಸುವ ನೂರಾರು ಚಿತ್ರಗಳು ಮುಖ್ಯವಾಗಿ ಕಂಡುಬರುತ್ತದೆ.

ಜನಪದ ಕಲೆಯು ಕಲಾತ್ಮಕ ಮತ್ತು ಪ್ರಯೋಜನಾತ್ಮಕ. ಈ ಹಿನ್ನೆಲೆಯಲ್ಲಿ ಹೆಚ್ಚು ಪ್ರಸ್ತುತವಾಗುತ್ತದೆ. ಶಿಲ್ಪಕಲೆಯನ್ನು ಈ ಎರಡು ಏಕಕಾಲಕ್ಕೆ ಅನ್ವಯವಾಗುವುದಿಲ್ಲ ಜನಪದ ಶಿಲ್ಪಕಲೆ ಮತ್ತು ಚಿತ್ರಕಲೆ ಸಾಮಾಜಿಕ ಜೀವನದ ಒಳರಕ್ತ, ಮಾಂಸಗಳನ್ನು ಅದ್ಭುತ ಕಲ್ಪನೆಯ

ಮೂಲಕ ಜಂಗಮವಾಗುವಂತೆ ಮಾಡುವ ಸಾಮರ್ಥ್ಯ ಜನಪದ ಚಿತ್ರಗಳಲ್ಲಿ ಅಧ್ಯಯನದ ಯಾವ ಅರಿವು ಇಲ್ಲದ ತಾವು ಪಡೆದ ಅನುಭವಗಳೇ ಸಹಜವಾದ ಆಕರ ಅಥವಾ ಮೂರ್ತ ರೂಪ ನೀಡಿದರೆ ಅದೇ ಜನಪದ ಶಿಲ್ಪಕಲೆಯಾಗುತ್ತದೆ. ಎಂದು ಹೇಳಲಾಗಿದೆ.

ಮರದಲ್ಲಿ ಪೀಠೋಪಕರಣಗಳನ್ನು ತಯಾರಿಸುವಲ್ಲಿ ಪ್ರಥಮ ಸಂಸ್ಕೃತಿಯೆಂದರೆ ಈಜಿಪ್ಟ್. ಸುಮಾರು ಕ್ರಿಪೂ. ೩೪೦೦ರಲ್ಲಿ ಮಾಡಲಾದ ಮರದ ಮಂಚ ಸುಪ್ಪತ್ತಿಗೆ ಮುಂತಾದವುಗಳಿಗಾಗಿ ಹಂಬಲಿಸುತ್ತದೆ. ಎಂದು ನಂಬುತ್ತಿದ್ದರಿಂದ ಗೋರಿಗಳೊಳಗೆ ಆಸನಗಳು, ಮೇಜುಗಳು, ಮಂಚಗಳು ಇತ್ಯಾದಿಗಳನ್ನು ಜೋಡಿಸಿ ಇಡುತ್ತಿದ್ದರು. ಮೃತಪಟ್ಟ ವ್ಯಕ್ತಿಯ ಸ್ಥಾನಮಾನಕ್ಕೆ ಅನುಗುಣವಾಗಿ ಈ ಮರದ ವಸ್ತುಗಳಲ್ಲಿ ದಂತ ಅಥವಾ ಪ್ರಶಸ್ತ ಹರಳುಗಳು ಅಥವಾ ಬೆನ್ನ ಹುದುಗಿಸಿ ಅಲಂಕೃತಗೊಳಿಸಲಾಗುತ್ತಿತ್ತು. ಎತ್ತರದ ಹಿಂಬದಿಯುಳ್ಳ ಆಸನಗಳು ಸ್ಪಿಂಕ್ಸ್ ಅಥವಾ ಪ್ರಾಣಿ ಸ್ವರೂಪದ ದೇವತೆಯ ಆಕಾರದಲ್ಲಿದ್ದು ಅವುಗಳ ಕಾಲು ಸಿಂಹದ ಪಂಜರಗಳಾಗಿದ್ದವು.

ಭಾರತದಲ್ಲಿ ಮರಕೆತ್ತನೆ ಒಂದು ಅದ್ಭುತ ಸಾಂಪ್ರದಾಯ. ಮರದಲ್ಲಿ ಕೈಗೊಳ್ಳಲಾಗುವ ಸೂಕ್ಷ್ಮ ಕೆತ್ತನೆಗಳು ದೇವಾಲಯಗಳಲ್ಲಿ ಮತ್ತು ಮಠಗಳಲ್ಲಿ ಮತ್ತು ಮಂಟಪಗಳಾಗಿ, ಕಾಷ್ಠಶಿಲ್ಪಗಳಾಗಿ, ಸಾಕಾರಗೊಂಡಿವೆ. ಅರಮನೆಗಳಲ್ಲಿ ಅತ್ಯಾಕರ್ಷಕ ದ್ವಾರಗಳಾಗಿ, ಮನೆಗಳಲ್ಲಿ ಸುಂದರ ವಿನ್ಯಾಸದ ಕಂಬಗಳಾಗಿವೆ, ಹಿಮಾಚಲ ಪ್ರದೇಶದಲ್ಲಿನ ಸುಮಾರು ೧೦೦೦ ವರ್ಷಗಳಷ್ಟು ಪುರಾತನವಾದ ಹಿಂಡಿಂಬೆ ದೇವಾಲಯವು ಚಳಿ, ಗಾಳಿ, ಹಿಮಕ್ಕೆ ಮೈ ಒಡ್ಡಿದರೂ ಸಹ, ಸ್ವಲ್ಪವೂ ಹಾನಿಯಾಗದಂತೆ ಉಳಿದಿರುವುದು ಮರದ ಸಂರಕ್ಷಣೆಗೆ ಮಾರ್ಗದರ್ಶನ ಹಾಕಿಕೊಟ್ಟಿದೆ.

**ಕಲಘಟಗಿ ಕಲೆಯ ಚಿತ್ರಗಳ ರಚನಾ ವಿಧಾನ**

ದಶಾವತಾರದ ಚಿತ್ರಗಳು ಮಾಡುವಾಗ (ರಚಿಸುವಾಗ) ಯಾವ ಅಳತೆ ಬೇಕೋ ಆ ಅಳತೆಯ ತಕ್ಕಂತೆ ಗೋಡೆಯ ಮೇಲೆ ಚಿತ್ರವನ್ನು ಮೊದಲು ಬಿಡಿಸುತ್ತಾರೆ. ಅಳತೆಗೆ ತಕ್ಕಂತೆ ಹೆಬ್ಬೇವು ಕಟ್ಟಿಗೆಯನ್ನು ಕತ್ತರಿಸಿಕೊಂಡು ಮುಖ ಕೈ ಕಾಲುಗಳನ್ನು ಬಿಡಿ ಬಿಡಿಯಾಗಿ ರಚಿಸುತ್ತಾರೆ. ಕಟ್ಟಿಗೆಯ ಪೀಠದ ಮೇಲೆ ಎಲ್ಲ ಭಾಗಗಳನ್ನು ಜೋಡಿಸುತ್ತಾರೆ.

ದಶಾವತಾರಗಳ ಕಲಾವಿದ ತನ್ನ ಕಲ್ಪನೆಯ ಚಿತ್ರಗಳನ್ನು ಯಾವುದೆ ಧಾರ್ಮಿಕ ನಿರ್ಬಂಧವಿಲ್ಲದೆ ಪ್ರತಿಮೆಗಳ ರಚನೆಗಳಲ್ಲಿ ಪ್ರಕಟಮಾಡಿದ್ದಾನೆ. ಇಂತಹ ವೈವಿಧ್ಯಮಯವಾದ ರಚನೆಗಳನ್ನು ಗ್ರಾಮೀಣ ಸಮಾಜವು ಸ್ವಾಗತಿಸಿ ನಂಬಿಕೆ ಬೆಳೆಸಿಕೊಂಡದ್ದು ಗಮನಾರ್ಹ, ಅಂಗಾಗಗಳ ರಚನೆಯಲ್ಲಿ ಯಾವುದೆ ಪ್ರಮಾಣ ಬದ್ಧತೆಯಿಲ್ಲ. ಬ್ಣಣ, ಪ್ರಭಾವಳಿ, ರಚನೆ, ವಾಹನಗಳು ಮತ್ತು ಇತರೆ ಅಲಂಕರಣಗಳಲ್ಲಿ ಏಕತಾನತೆ ಗೌಣವಾಗಿ ಭಿನ್ನ, ಭಿನ್ನ ರಚನೆಗಳು ಹುಟ್ಟಿಕೊಂಡಿವೆ. ಇದು ಜನಪದ ಕಲೆಯ ಮುಖ್ಯ ಲಕ್ಷಣ. ನೀಳವಾದ ಕೈ ಕಾಲುಗಳನ್ನು ಹೊಂದಿರುತ್ತವೆ.

ವಿಷ್ಣು ವಾಹನವಾದ ಹಾವಿನ ವಿವಿಧ ಭಂಗಿಗಳಲ್ಲಿ ರಚಿಸಿದ್ದಾರೆ. ಪ್ರತಿಮೆಗಳಲ್ಲಿ ಪ್ರಧಾನವಾಗಿ ಹಳದಿ ಮತ್ತು ಕೆಂಪು ಬಣ್ಣ ಎದ್ದು ಕಾಣುತ್ತದೆ. ಎಲ್ಲಾ ಪ್ರತಿಮೆಗಳಲ್ಲಿ ಕೀರ್ತಿಮುಖ ಸಹಿತವಾದ ಪ್ರಭಾವಳಿಯನ್ನು ಹೊಂದಿವೆ. ಅಕ್ಕಪಕ್ಕದಲ್ಲಿ ಇರುವ ಸಣ್ಣ ಸಣ್ಣ ಸ್ತ್ರೀ ಪ್ರತಿಮೆಗಳನ್ನು ಅಕ್ಕ ತಂಗಿಯರೆಂದು, ಮಕ್ಕಳೆಂದು, ಸಖಿಯರೆಂದು ಇಚ್ಛಾಶಕ್ತಿ, ಮಹಾಶಕ್ತಿ ಎಂದು ನಾನಾ ರೀತಿಯಲ್ಲಿ ಕರೆಯುತ್ತಾರೆ. ಈ ಪ್ರತಿಮೆಗಳ ವಿಷ್ಣುವಿನ ಆರಾಧನೆಯಲ್ಲಿ ಹೊಸ ಅಳವಡಿಕೆಗಳೆಂದು ಹೇಳಬಹುದು. ಬಹುಶಃ ವಿಷ್ಣುವಿನ ಪ್ರತಿಮೆ ಎದ್ದು ಕಾಣುವಂತೆ ಮಾಡಲು ಎಡ ಬಲಗಳಲ್ಲಿ ಇಂತಹ ಸಣ್ಣ ಪ್ರತಿಮೆಗಳನ್ನು ಅಳವಡಿಸಿರಬಹುದು.

**ವಿಷ್ಣುವಿನ ದಶಾವತಾರದ ಚಿತ್ರಗಳಾದ**

೧. ಮತ್ಸ್ಯಾವತಾರ

೨. ಕೂರ್ಮಾವತಾರ

೩. ವರಾಹವತಾರ

೪. ಉಗ್ರ ನರಸಿಂಹನವತಾರ

೫. ವಾಮನವತಾರ

೬. ಪರುಶುರಾಮಾವತಾರ

೭. ರಾಮವತಾರ

೮. ಕೃಷ್ಣಾವತಾರ

೯. ಬೌದ್ಧವತಾರ

೧೦. ಕಲ್ಕಿ ಅವತಾರ

ಹೀಗೆ ಚಿತ್ರಗಳ ಹತ್ತು ಅವತಾರದ ವರ್ಣ ಸಂಯೋಜನೆ ಮತ್ತು ರೇಖಾ ವಿನ್ಯಾಸದಿಂದ ಕೂಡಿವೆ. ಲಜ್ಜಾವರ ವರ್ಣದಿಂದ ಎಲೆ, ಹೂವು, ಬಳ್ಳಿ ಮುಂತಾದ ವಿನ್ಯಾಸಗಳಿಂದ ಅಲಂಕರಿಸಿರುವುದು ಕಂಡು ಬರುತ್ತವೆ.

ಮರದ ದಿಮ್ಮಿಯಿಂದ ವಿಷ್ಣುವಿನ ಪ್ರತಿಮೆಗಳು ವಿವಿಧ ಅಳತೆಯ ಉದ್ದಗಲವನ್ನು ಹೊಂದಿರುವುದರಿಂದ ಒಂದೇ ಮರದ ತುಂಡಿನಿಂದ ಪ್ರತಿಮೆಯನ್ನು ರಚಿಸುವದಕ್ಕೆ ಬರುವುದಿಲ್ಲ. ಪ್ರತಿಮೆಯ ಪ್ರತಿ ಅಂಗವು ಒಂದು ಅಥವಾ ಎರಡು ಬಿಡಿಭಾಗಗಳ ಜೋಡಣೆಯನ್ನು ಒಳಗೊಂಡಿರುತ್ತದೆ. ಕಲಾಕಾರ ಮೊದಲು ತಾನು ಮಾಡಬೇಕೆಂದಿರುವ ಪ್ರತಿಮೆಯ ಒಟ್ಟು ಎತ್ತರವನ್ನು ನಿರ್ಧರಿಸಿ ನಂತರ ಅದರ ವಿವಿಧ ಅಂಗಾಂಗಗಳ ಉದ್ದಗಲಗಳನ್ನು ಗುರುತು ಮಾಡಿಕೊಳ್ಳುತ್ತಾನೆ. ಈ ಅಳತೆಗೆ ಸರಿಹೊಂದುವ ಮರದ ತುಂಡುಗಳನ್ನು ಆಯ್ಕೆ ಮಾಡಿಕೊಂಡು

ಕೆತ್ತನೆ ಮಾಡಬೇಕಾಗಿರುವ ಭಾಗವನ್ನು ಸಮತಟ್ಟುಮಾಡಲಾಗುವುದು ನಂತರ ಮಸಿಕಡ್ಡಿಯಿಂದ ಸಪಾಟಾದ ಭಾಗದ ಮೇಲೆ ಸಂಬಂಧಪಟ್ಟ ಆಕೃತಿಯ ಗೆರೆಯನ್ನು ಹಾಕಲಾಗುತ್ತದೆ. ಈ ಗೆರೆಯ ಆಚೆಗಿನ ಮರವನ್ನು ಉಳಿಯಿಂದ ತೆಗೆದು ಹಾಕುತ್ತಾರೆ.

**ಮತ್ಸ್ಯವತಾರ ಚಿತ್ರ-೧**

ದುಷ್ಟ ಶಕ್ತಿಯೊಂದು ಪೌರಾಣಿಕ ಗ್ರಂಥಗಳಾದ ವೇದಗಳಲ್ಲಿ ವಿಷ್ಣು-ಮತ್ಸ್ಯ ಅವತಾರವನ್ನು ತಾಳಿ ದುಷ್ಟಶಕ್ತಿಯೊಂದಿಗೆ ಹೋರಾಡಿ ವೇದ ಉಪನಿಷತ್ತುಗಳನ್ನು ರಕ್ಷಿಸಲು ಈ ಅವತಾರವನ್ನು ತಾಳಿದ ಎಂದರೆ ಇದಕ್ಕೆ ಇನ್ನೊಂದು ಕಥೆ ಉಪರವಸ್ತು ಎಂಬ ರಾಜ್ಯವನ್ನು ತನ್ನ ವೀರ್ಯವನ್ನು ಹೆಂಡತಿಯ ಬಳಿಗೆ ಕಳುಸುತ್ತಿರುವಾಗ ಅದು ಗಂಗೆಯಲ್ಲಿ ಜಾರಿ ಬಿದ್ದ ಮೀನಿನಿಂದ ಗರ್ಭವನ್ನು ಸೇರಿತು ಅದರ ಗರ್ಭದಿಂದ ಬಂದವನು ಮತ್ಸ್ಯರಾಜ ಅವನ ಸಾಕುಮಗಳು ಮತ್ಸ್ಯಗಂಧಿ, ಈಕೆ ಪರಶುರನನ್ನ ಕೂಡಲು ವ್ಯಾಸ ಹುಟ್ಟಿದೆ. ಹಾಗೆ ವೇದಗಳನ್ನು ಕದ್ದು ಸೋಮರನನ್ನು ಸವಾಜ್ಞೆಯಂತೆ ವಿಷ್ಣುವು ಮತ್ಸ್ಯರೂಪದಿಂದ ಸಂಹರಿಸಿದ ಮೇಲೆ ಹೊರಳಾಡಿ ಸಮುದ್ರಗಳನ್ನೆಲ್ಲ ಒಂದು ಮಾಡುತ್ತಿರಲು ಶಿವನು ಬಕ ರೂಪವನ್ನು ತಾಳಿ ಅದನ್ನು ಕೊಂದು ಅದರ ಚರ್ಮವನ್ನು ತಲೆಗೆ ಸುತ್ತಿದನು. ಎಂದು ಶಿವಶರಣರ ಕಥಾ ರತ್ನ ಕೋಶದಲ್ಲಿ ತ.ಸು.ಶಾಮರಾಯರ ಉಲ್ಲೇಖಿಸಿದ್ದಾರೆ.

**ಕೂರ್ಮಾವತಾರ ಚಿತ್ರ-೨**

ಎರಡನೆಯ ಅವತಾರದಲ್ಲಿ ಸಮುದ್ರ ಮಂಥನದಲ್ಲಿ ಜಗತ್ತನ್ನು ಕಾಪಾಡಲು ಕೂರ್ಮಾ ಅವತಾರವನ್ನು ತಾಳುತ್ತಾನೆ. ಈ ಚಿತ್ರದಲ್ಲಿ ಮೇಲಿನ ಕೈಗಳಲ್ಲಿ ಚಕ್ರ, ಗಧೆ, ಕೆಳಗಿನ ಕೈಯಲ್ಲಿ ಖಡ್ಗ, ಗುರಾಣಿಯಿದೆ. ಆಮೇಯ ದೇಹ ಹೊಂದಿದ್ದು ಹಸಿರು ವರ್ಣಗಳಲ್ಲಿ ಬಳಸಲಾಗಿದೆ. ಕಿರೀಟ ಧರಿಸಿದ್ದು ಮೈಬಣ್ಣ ಕೆಂಪಾಗಿದ್ದು, ರಾಕ್ಷಸನು ನೆಲಕ್ಕೆ ಉರುಳಿಸಿದ್ದು ಕೈಯಲ್ಲಿ ಗುರಾಣಿ ಖಡ್ಗ, ಚಿತ್ರಿಸಲಾಗಿದೆ. ಮತ್ತು ಇಲ್ಲಿ ವಿಶಿಷ್ಟವಾಗಿ ನೀಲ ವರ್ಣದಿಂದ ಆಕಾಶ ಬೆಟ್ಟ ಸಮುದ್ರವನ್ನು ಇಲ್ಲಿ ಕಾಣಬಹುದಾಗಿದೆ.

**ವರಾಹಾವತಾರ ಚಿತ್ರ-೩**

ಮೂರನೆಯ ಅವತಾರದಲ್ಲಿ ವಿಷ್ಣುವರಾಹ ಮುಖವನ್ನು ಹೊಂದಿದ್ದು ಇಲ್ಲಿ ಇವನು ಗರ್ಭಿಣಿಯಾದ ತನ್ನ ಹೆಂಡತಿಗೆ ಹುಟ್ಟಿದ ಮಣ್ಣನ್ನು ಬಯಸುವ ಭೂಮಿಯನ್ನೇ ಹೊತ್ತುಕೊಂಡು ಹೋದ ಹಿರಾಣಾಕ್ಷನನ್ನು ಕೊಲ್ಲಲು ವರಾಹ ರೂಪವನ್ನು ತಾಳಿದನು. ಅದರ ಕೋರೆದಾಡಿಯನ್ನು ಕಿತ್ತು ಶಿವನಿಗೆ ಧರಿಸಲು ಕೊಟ್ಟನು. ಈ ಚಿತ್ರದಲ್ಲಿ ವರಾಹ ಮುಖ ಹೊಂದಿದ್ದು ಕೈಯಲ್ಲಿ ಗಧೆ, ಖಡ್ಗ, ಗುರಾಣಿ, ಕತ್ತಿ, ಮೈಬಣ್ಣ ನೀಲಿಯಾಗಿದ್ದು ಹಳದಿ ಪಂಚೆ ಧರಿಸಿದ್ದು ಮೇಲುಪದರಾಗಿ ಕೆಂಪು ಬಟ್ಟೆಯನ್ನು ಇಳಿಬಿಡಲಾಗಿದೆ.' ಕಿರೀಟ ಧರಿಸಿದ್ದು ಇಲ್ಲಿ ಹಿರಾಣಕ್ಷನು ಕೈಮೇಲೆತ್ತಿ ಖಡ್ಗ

ಹಿಡಿದು ಇನ್ನೊಂದು ಕೈಯಲ್ಲಿ ಗುರಾಣಿ ಇದೆ. ಹಳದಿ ಪಂಚೆ ಹಸಿರು ವರ್ಣದ ಬಟ್ಟೆಯನ್ನು ಅದರ ಮೇಲೆ ಬಳಸಲಾಗಿದೆ. ಅದೇ ರೀತಿಯಾಗಿ ಇಬ್ಬರೂ ಆಭರಣಗಳನ್ನು ಹೊಂದಿದ್ದಾರೆ, ಈ ಹಿನ್ನೆಲೆಯಾಗಿ ನೀಲಿ, ಬಿಳಿ, ತಿಳಿಗುಲಾಬಿ, ಮಿಶ್ರಿತವಾಗಿದೆ. ಸಣ್ಣದಾಗಿ ಕಾಣುವ ಬಟ್ಟೆಗಳು ಹಾಗೂ ಒಂದು ಮರವನ್ನು ಚಿತ್ರಿಸಲಾಗಿದೆ.

**ನರಸಿಂಹವತಾರ ಚಿತ್ರ–೪**

ನಾಲ್ಕನೆಯ ಅವತಾರದಲ್ಲಿ ವಿಷ್ಣುವು ನರಸಿಂಹ ಅವತಾರ ತಾಳಿ ಹಿರಣ್ಯಾಕ್ಷನನ್ನು ಕೊಂದಮೇಲೆ ಲೋಕಕಂಟನಾಗಿರಲು, ಶಿವನು ಶಿರಭಾವತಾರವನ್ನು ಮಾಡಿ ಶಿರವನ್ನು ಕೀರ್ತಿಮುಖವಾಗಿ ಧರಸಿದನ್ನು ಉಗ್ರರೂಪ ತಾಳಿದ ವಿಷ್ಣುವಿನ ಕೈಗಳಲ್ಲಿ ಚಿತ್ರಗಳು, ಕೆಳಗಿನ ಕೈಗಳಿಂದ ಅವನನ್ನು ಹಿರಣ್ಯಕಶಿಪುವಿನ ಸಾವಿಲ್ಲದ ವರ ಪಡೆದವನಾಗಿದ್ದರಿಂದ ವಿಷ್ಣು ಅವನನ್ನು ಹೊಸ್ತಿಲ ಮೇಲೆ ಸಂಹಾರ ಮಾಡುತ್ತಾನೆ, ಕೆಂಪು ಮೈಬಣ್ಣ ಹೊಂದಿದ ವಿಷ್ಣು ಹಳದಿ ಪಂಚೆಯನ್ನು ಧರಿಸಿದ್ದಾನೆ. ಮುಖವು ಸಿಂಹ ಗರ್ಜನೆಯಿಂದ ಕೂಡಿದೆ. ನಾಲ್ಕು ಕೈಗಳಲ್ಲಿ ಖಡ್ಗಗಳು ಹಿರಣ್ಯಕಶಿಪು ನರಸಿಂಹನ ತೊಡೆಯ ಮೇಲೆ ಅಡ್ಡವಾಗಿದ್ದು ಕೆಂಪು ಪಂಚೆಯನ್ನು ಧರಿಸಿದ್ದಾನೆ. ನರಸಿಂಹನು ಕಂಬವನ್ನು ಸೀಳಬಂದಿರುವ ಹಾಗೇ ಮೂಡಿಬಂದಿದೆ. ಕಂಬವು ನೀಲಿ ವರ್ಣ ಸುಳಿವುಗಳಿಂದ ಕೂಡಿದ್ದು ಈ ಹಿನ್ನೆಲೆಯಲ್ಲಿ ನೀಲಿ, ಬಿಳಿ, ಗುಲಾಬಿ, ವರ್ಣ ಪ್ರಮುಖ್ಯವಾಗಿ ಕಂಡುಬರುತ್ತವೆ.

**ವಾಮನವತಾರ ಚಿತ್ರ–೫**

ಐದನೆಯ ಅವತಾರದಲ್ಲಿ ವಿಷ್ಣು ವಾಮನ ಅವತಾರವನ್ನು ತಾಳಿ ಆಮೇಲೆ ತ್ರಿವಿಕ್ರಮನಾದಾಗ ಆತನು ಆಕಾಶಕ್ಕೆ ಎತ್ತಿದ ಕಾಲನ್ನು ಬ್ರಹ್ಮನು ಕತ್ತರಿಸಿ ಹಾಕಿದನು. ಹರನು ಕಾಲ ಬೈರವನ ರೂಪವನ್ನು ತಾಳಿ ತ್ರಿವಿಕ್ರಮನನ್ನು ಕೊಂದು ಬೆನ್ನೆಲುಬನ್ನು ಕಂಕಾಳ ದಂಡವಾಗಿ ಧರಿಸಿದನು. ಇಲ್ಲಿ ವಿಷ್ಣುವಿನ ಮುಖವು ಮುಗ್ದ ಮೇಲೆ ಇಟ್ಟಿರುವುದು ಕಂಡುಬರುತ್ತದೆ. ಮೈಬಣ್ಣ ಕೆಂಪಾಗಿದ್ದು ಹಳದಿ, ಹಸಿರು ಪಂಚೆಯನ್ನು ಧರಿಸಿದ್ದರು. ಈ ಹಿನ್ನೆಲೆಯಲ್ಲಿ ಬೃಹದ್ದಾಕಾರದ ಕಂಬವು ರಚನೆಯಾಗಿದೆ.

**ಪರಶುರಾಮವತಾರ ಚಿತ್ರ–೬**

ಆರನೆಯ ಅವತಾರದಲ್ಲಿ ವಿಷ್ಣುಪರುಶುರಾಮನಾಗಿ ತಂದೆಯಾದ ಜಮದಗ್ನಿಯ ಹೆಂಡತಿ ರೇಣುಕೆಯು ಜಾರೆಯಾರಲು, ಅವಳನ್ನು ಸರಿ ಮಾಡಲಾರದೇ ಆ ಋಷಿ ಕೋಪಗೊಂಡು ತನ್ನ ಕೋಪವನ್ನು ಸಮುದ್ರಕ್ಕೆ ಎಸೆಯಲು ಅದು ಬಡಬಾಗ್ನಿಯಾಯಿತು. ಹೀಗೆ ಸಾದು ಆದ ಆ ಋಷಿಯನ್ನು ಕಾರ್ತಮೀರ್ರ್ಯಾರ್ಜುನನ್ನು ಕಾಮಧೇನುವಿನ ಆಶೆಯಿಂದ ಕೊಂದು ಹಾಕಿದನು. ಆಗ ವಿಷ್ಣು ಪರಶುರಾಮನ ಅವತಾರ ತಾಳಿ ಕಾರ್ಥವೀರ್ರ್ಯಾರ್ಜುನನ್ನು ಕೊಂದು, ಇಪ್ಪತ್ತೊಂದು

ಸಲ ಕ್ಷೇತ್ರಿಯನ್ನು ಸಂಹರಿಸಿ ಶ್ರೀರಾಮನಿಂದ ಸೋತು ಪಾಪ ಪರಿಹಾರ್ಥವಾಗಿ ಕಂಡುಬಂದಿದ್ದಾಗಿದೆ. ಇಲ್ಲಿಯೂ ಸಹ ಹಳದಿ ಪಂಚೆ, ಕೆಂಪು ಬಟ್ಟೆಯನ್ನು ಮೇಲೆ ಬಳಸಲಾಗಿದೆ. ಜಗತ್ತನೆಲ್ಲ ಬ್ರಾಹ್ಮಣರಿಗೆ ದಾನ ಮಾಡಿ ಸಮುದ್ರ ಮದ್ಯದಲ್ಲಿ ನೆಲೆಸಿದನು. ಇಲ್ಲಿಯ ಚಿತ್ರ ಅಪೂರ್ಣವಾಗಿ ಕಂಡು ಬಂದಿದ್ದಾಗಿದೆ. ಅಲ್ಲದೇ ಕಿರೀಟಧಾರಿಯಾಗಿದ್ದಾನೆ. ಹಾಗೇ ನೀಲಿ ಆಕಾಶ ಗಿಡ ಬೆಟ್ಟಗಳ ಕಂಡುಬಂದಿರುತ್ತದೆ.

**ರಾಮಾವತಾರ ಚಿತ್ರ-೭**

ಏಳನೆಯ ಅವತಾರದಲ್ಲಿ ವಿಷ್ಣು ಶ್ರೀರಾಮನಾಗಿ ರಾವಣನನ್ನು ಸಂಹರಿಸಲು ಶ್ರೀರಾಮನು ಬಾಣ ಬಿಡುತ್ತಿದ್ದು ನೀಲಿ ಮೈಬಣ್ಣ ಹೊಂದಿದ್ದಾನೆ, ಹಳದಿ, ಕೆಂಪು ಪಂಚೆಯನ್ನು ಧರಿಸಿದ್ದಾನೆ. ರಾವಣ ಗಧೆಯಿಂದ ಶ್ರೀ ರಾಮನಿಗೆ ಹೊಡೆಯಲು ಕೈಮೇಲಕ್ಕೆ ಎತ್ತಿದ್ದಾನೆ ಇಬ್ಬರೂ ಆಭರಣ ಧರಿಸಿದ್ದು ಹಳದಿ ಪಂಚೆಯನ್ನು ನೀಲಿ, ಆಕಾಶ, ಗಿಡ ಮರಗಳು, ರಚನೆಗೊಂಡಿರುವುದು ಇಲ್ಲಿ ಕಾಣಬಹುದಾಗಿದೆ.

**ಕೃಷ್ಣವತಾರ ಚಿತ್ರ-೮**

ಎಂಟನೆಯ ಅವತಾರದಲ್ಲಿ ವಿಷ್ಣುವು ಕೃಷ್ಣವತಾರ ಮಾಡಿದಾಗ ಒಮ್ಮೆ ದುರ್ವಾಸನು ಕೋಪಗೊಳ್ಳಲು ಮಡದಿಯಾದ ರುಕ್ಮಿಣಿಯೊಡನೆ ಆ ಋಷಿಯನ್ನು ರಥದಲ್ಲಿ ಕುಳ್ಳಿರಿಸಿ ಬೆತ್ತಲೆಯಾಗಿ ರಥವೆಳೆದ ಆತನು ಗೊಲ್ಲರಲ್ಲಿ ಹುಟ್ಟಿ, ಹಾದರ ಮಾಡಿ ಪಾಂಡವರ ಆಳಾಗಿದ್ದು ಭೀಷ್ಮನಿಂದ ತರಿಸಿಕೊಂಡು ತನ್ನ ಬಂಧುಗಳನ್ನೆಲ್ಲಾ ತಮ್ಮ ತಮ್ಮಲ್ಲೇ ಹೊಡೆದಾಡಿ ಸತ್ತಮೇಲೆ ರಜಕನೆಂಬ ಬೇಡನ ಬಾಣದಿಂದ ಸತ್ತ. ಇಲ್ಲಿ ಕೃಷ್ಣನು ಮೈಬಣ್ಣ ನೀಲಿಯಾಗಿದ್ದು ಆಭರಣ ಧರಿಸಿದ್ದಾನೆ. ಬೃಹತ್ತಾದ ಎರಡು ಕಂಬಗಳ ನಡುವೆ ಈ ದೃಶ್ಯ ಕಂಡುಬರುತ್ತದೆ. ಈ ಹಿನ್ನೆಲೆಯ ನೀಲಿ ಕಂಬಗಳ ಮೇಲೆ ನಕ್ಷಾವಿನ್ಯಾಸಗಳೊಂದಿಗೆ ಕಂಡು ಬಂದಿವೆ. ಕಂಬಗಳು ಜಾಂಬಳಿ ವರ್ಣದಲ್ಲಿ ಕಾಣಬಹುದಾಗಿದೆ.

**ಬುದ್ಧವತಾರ ಚಿತ್ರ-೯**

ಒಬ್ಬತ್ತನೆಯ ಅವತಾರವಾಗಿ ವಿಷ್ಣು ತ್ರಿಪುರಕ್ಕೆ ಕಳುಹಿಸಲು ಆತನು ಬುದ್ದವಾಗಿ ಹೋಗಿ ಋಷಿಗಳಿಗೆಲ್ಲಾ ಧರ್ಮ ಬೋಧನೆ ಮಾಡಿ, ಬೌದ್ಧ ಮತವನ್ನು ಹರಡಿದನು ಈ ಚಿತ್ರದಲ್ಲಿ ಬುದ್ದನು ನಗ್ನವಾಗಿದ್ದ ಧ್ಯಾನದಲ್ಲಿದ್ದಾನೆ, ಕೆಂಪು ಮೈಬಣ್ಣ ಹೊಂದಿದ್ದು ದೊಡ್ಡದಾದ ಗಿಡದ ಕೆಳಗೆ ಆಸೀನನಾಗಿದ್ದಾನೆ. ನೀಲಿ ಮತ್ತು ಜಾಂಬಳಿ ವರ್ಣ ಬಳಸಿಕೊಂಡು ಚಿತ್ರಗಳ ರಚನೆ ಮಾಡಿರುವುದು ಕಾಣಬಹುದಾಗಿದೆ.

ಮಾನವನು ಪ್ರಾಚೀನ ಕಾಲದಿಂದಲೇ ಹಲವಾರು ನಂಬಿಕೆಗಳ ಹಿನ್ನೆಲೆಯಲ್ಲಿ ದೇವರನ್ನು ಸೃಷ್ಟಿಸಿಕೊಂಡನು. ಅವುಗಳಿಗೆ ತನ್ನದೇ ರೂಪ, ಆಕಾರಗಳನ್ನು ಆರೋಪಿಸಿದನು. ಆ ರೂಪಗಳನ್ನು

ಕಲ್ಲು, ಕಟ್ಟಿಗೆ ಮುಂತಾದ ಮಾಧ್ಯಮಗಳಲ್ಲಿ ರೂಪಿಸಿ ಅವುಗಳಿಗೆ ವಸ್ತ್ರ, ಒಡವೆಗಳನ್ನು ಉಡಿಸಿ-ತೊಡಿಸಿ ಅಲಂಕಾರ ಮಾಡಿ ಸಂತೋಷ ಪಡುತ್ತಾ ಬಂದಿದ್ದಾನೆ. ಸ್ತ್ರೀ ದೇವತಾ ಶಿಲ್ಪಗಳಿಗೆ ಸ್ತ್ರೀ ವೇಷಭೂಷಣಗಳನ್ನು, ಪುರಷ ದೇವತೆಗಳಿಗೆ ಪುರುಷ ವೇಷಭೂಷಣಗಳನ್ನು ತೊಡಿಸಿ ಆರಾಧಿಸುತ್ತಾ ಬಂದಿದ್ದಾನೆ. ನಮ್ಮ ಗ್ರಾಮೀಣ ಪ್ರದೇಶದಲ್ಲಿ ಈ ದೇವತಾ ಶಿಲ್ಪಗಳು ಇಂದಿಗೂ ಸಿಗುತ್ತದೆ. ಇವುಗಳನ್ನು ಗ್ರಾಮದೇವತೆಗಳೆಂದೂ ಸಹ ಕರೆಯುತ್ತಾರೆ. ಗ್ರಾಮ ದೇವತೆಗಳನ್ನು ಪ್ರತಿಯೊಂದು ಗ್ರಾಮದಲ್ಲಿ ಕಾಣುತ್ತೇವೆ. ಮುಖ್ಯವಾಗಿ ಉತ್ತರ ಕರ್ನಾಟಕದಲ್ಲಿ ರಚಿಸಲಾಗಿರುವ ದ್ಯಾಮವ್ವ, ದುರುಗವ್ವ, ಮಾರಮ್ಮ ದೇವಿ ಮುಂತಾದ ಸ್ತ್ರೀ ದೇವತಾ ಶಿಲ್ಪಗಳು ಈ ಪ್ರದೇಶದಲ್ಲಿ ಮಾತೃದೇವತಾರಾಧನೆ ವ್ಯಾಪಕವಾಗಿದ್ದು ಸ್ತ್ರೀ ದೇವತಾ ಶಿಲ್ಪಗಳನ್ನು ಹೆಚ್ಚಾಗಿ ಕಾಣಬಹುದಾಗಿದೆ. ಸ್ತ್ರೀ ಗ್ರಾಮ ದೇವತೆಗಳು ಶಕ್ತಿಯ ಪ್ರತಿರೂಪಗಳೆಂದು ನಂಬಲಾಗಿದೆ. ಗ್ರಾಮದ ಜನರಲ್ಲಿ ಭಯ, ಭಕ್ತಿ, ಗೌರವಗಳು ಮನೆ ಮಾಡಿವೆ.

ರಚನೆಯಲ್ಲಿ ಏಕತಾನತೆ ಇಲ್ಲದ ಹಾಗೂ ಶಾಸ್ತ್ರೀಯ ರಚನೆಗಳಲ್ಲದೆ ಗ್ರಾಮದೇವತಾ ಶಿಲ್ಪಗಳು ಉತ್ತರ ಕರ್ನಾಟಕದಾದ್ಯಂತ ಕಂಡುಬರುತ್ತವೆ. ಆಚರಣೆ ಮತ್ತು ರಚನೆ ಎರಡರಲ್ಲೂ ಅಪ್ಪಟ ಜನಪದವಾಗಿರುವ ಈ ಶಿಲ್ಪಗಳು ಇವುಗಳ ವಾಹನಗಳು ಪ್ರಭಾವಳಿ, ಬಣ್ಣಗಾರಿಕೆ, ಎಲ್ಲದರಲ್ಲೂ ವೈವಿಧ್ಯತೆಯಿದೆ. ನೀಳವಾದ ಕೈಕಾಲುಗಳ ರಚನೆ ಹೊಂದಿರುವ ಈ ಪ್ರಾಚೀನ ಕಾಲದಿಂದಲೂ ಜನಪದರ ದೈವವಾಗಿ ಆರಾಧಿಸಲ್ಪಡುತ್ತಾ ಬಂದಿವೆ.

ಕಿನ್ನಾಳ ಚೌಕಿಗಳ ಮೇಲಿನ ದಶಾವತಾರದ ಚಿತ್ರಗಳು ಚಿತ್ರಕಾರರು ರಚಿಸುವ ಚೌಕಿಗಳು ಕಿನ್ನಾಳ ಚೌಕಿಗಳೆಂದೇ ಪ್ರಸಿದ್ಧ ಪಡೆದಿವೆ. ಚೌಕಿಗಳನ್ನು ತಯಾರಿಸಲು ಪ್ಲೈವುಡ್ ಹಲಗೆಯನ್ನು ಬಳಸುತ್ತಾರೆ. ಚೌಕಿಗಳನ್ನು ತಯಾರಿಸಲಿಕ್ಕೆ ಸಮತಟ್ಟಾದ ಕಟ್ಟಿಗೆ ಬೇಕಾಗುವುದರಿಂದ ಅದಕ್ಕಾಗಿ ಪ್ಲೈವುಡ್‌ನ್ನು ಹೆಚ್ಚಾಗಿ ಬಳಸುತ್ತಿರುವುದು ಕಿನ್ನಾಳ ಕಲಾವಿದರಲ್ಲಿ ಕಂಡುಬರುತ್ತದೆ. ಕಿನ್ನಾಳ ಚೌಕಿ, ಗೋಡೆ ಫಲಕಗಳನ್ನು ರಚಿಸಲಿಕ್ಕೆ ಹೆಚ್ಚಾಗಿ ಬಳಸುತ್ತಾರೆ. ಇಲ್ಲಿ ವಿವಿಧ ನಮೂನೆಗಳಿವೆ. ಅಷ್ಟಕೋನಾಕೃತಿಯ ಹಲಗೆಗೆ ಉಂಟು ಕಾಲುಗಳ ಆಧಾರ ನೀಡಿ ತಾವೇ ತಯಾರಿಸಿದ "ಲಜವಾರ"ಬಣ್ಣದಿಂದ ಎಲೆ, ಹೂವು, ಬಳ್ಳಿಗಳಿಂದ ಸೂಕ್ಷ್ಮವಾಗಿ ಚಿತ್ರಿಸುತ್ತಾರೆ ಮತ್ತು ಫಲಕಗಳಲ್ಲಿ ದಶಾವತಾರದ ನವಗ್ರಹ ಅಷ್ಟದಿಕ್ಪಾಲಕರು ಹಾಗೂ ದೇವತೆಗಳ ಚಿತ್ರಗಳನ್ನು ಬಿಡಿಸುತ್ತಾರೆ. ವರ್ಣಗಳ ಸಂಯೋಜನೆ ಸೂಕ್ಷ್ಮ ರೇಖೆಗಳಿಂದ ಚೌಕಿಗಳು ಅಲಂಕೃತಗೊಂಡಿರುತ್ತವೆ. ಅದೇ ರೀತಿಯ ವರ್ತುಳಾಕಾರದ ಗೋಡೆಯ ಫಲಕದ ಮೇಲೆ ವಿಷ್ಣುವಿನ ದಶಾವತಾರದ ಚಿತ್ರವನ್ನು ಫಲಕಗಳಿಂದ ಅಲಂಕರಿಸಲಾಗಿದೆ. ಮಧ್ಯಬಿಂದುವಿನಿಂದ ಒಂದು ವೃತ್ತವನ್ನು ರಚಿಸಿ ಅದರಲ್ಲಿ ವಿಷ್ಣುವಿನ ಚಿತ್ರಗಳನ್ನು ಚಿತ್ರಿಸಲಾಗಿದೆ. ಇಲ್ಲಿ ಮೈಬಣ್ಣ ನೀಲಿ ವರ್ಣದಿಂದ ಬಿಡಿಸಿರುವುದು ಕಾಣಬಹುದು. ಕೈಗಳಲ್ಲಿ ಶಂಖ, ಚಕ್ರಗಳನ್ನು ಹಿಡಿದಿರುವುದು ನೋಡಬಹುದು.

# ಮರ ಮಾಧ್ಯಮದ ದಶಾವತಾರದ ಚಿತ್ರಗಳು



ಚಿತ್ರ-೧೦



ಚಿತ್ರ-೧



ಚಿತ್ರ-೯



ಚಿತ್ರ-೨



ವಿಷ್ಣುವಿನ ದಶಾವತಾರದ ಚಿತ್ರ



ಚಿತ್ರ-೮



ಚಿತ್ರ-೩



ಚಿತ್ರ-೭



ಚಿತ್ರ-೪



ಚಿತ್ರ-೫



ಚಿತ್ರ-೬

## ಮರದ ಮೇಲಿನ ದಶಾವತಾರದ ಚಿತ್ರಗಳು





## ಅಧ್ಯಾಯ ೮
# ತೌಲನಿಕ ಅಧ್ಯಯನ

ಕರ್ನಾಟಕದ ಸಾಂಪ್ರದಾಯಿಕ ಚಿತ್ರಕಲೆಯು ಅನೇಕ ಧರ್ಮ ಆಸರೆಯಲ್ಲಿ ಬೆಳೆದಿರುವುದನ್ನು ಇತಿಹಾಸದಿಂದ ತಿಳಿಯಬಹುದು. ಇವುಗಳೆಲ್ಲವು ತನ್ನದೇ ಆದ ಮಾಧ್ಯಮದ ಮೇಲೆ ಚಿತ್ರಿತಗೊಂಡಿವೆ. ಅವುಗಳಲ್ಲಿ ದಶಾವತಾರದ ಪರಿಕಲ್ಪನೆಯ ಚಿತ್ರಗಳು ವಿಶೇಷವಾಗಿ ಕಂಡುಬಂದಿದ್ದು. ಈ ಮೂಲ ಸಂಶೋಧನೆಗೆ ಆಯ್ಕೆಮಾಡಿಕೊಂಡು ೧೪ನೇ ಶತಮಾನದ ವಿಜಯನಗರ ಚಿತ್ರಕಲೆ ವಿಜಯನಗರೋತ್ತರ ಚಿತ್ರಕಲೆಗಳಾದಿ ಮೈಸೂರು ಶೈಲಿಯ ಚಿತ್ರ ಕಲೆಗಳವರೆಗೂ ಅನೇಕ ಮಾಧ್ಯಮಗಳ ಮೇಲೆ ರಚಿತಗೊಂಡಿವೆ. ಇವುಗಳನ್ನು ಮಾಧ್ಯಮದ ಆಧಾರಿತವಾಗಿ ವರ್ಗಿಕರಿಸಿಕೊಂಡು ಭಿತ್ತಿಚಿತ್ರ ಮಾಧ್ಯಮ ಹಸ್ತಪ್ರತಿ ಮಾಧ್ಯಮ, ಗಂಜೀಫಾ ಮಾಧ್ಯಮ, ಕಾಗದ ಮರ ಮಾಧ್ಯಮ ಹಾಗೂ ಸಂಕೀರ್ಣ ಮಾಧ್ಯಮದ ಮೇಲೆ ರಚಿತವಾದ ಚಿತ್ರಕಲೆಯನ್ನು ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ.

ವಿಷ್ಣುವಿನ ದಶಾವತಾರಗಳು ವಿಜಯನಗರ ಕಾಲದಲ್ಲಿ ಗಾರೆ ಭಿತ್ತಿಯ ಮೇಲೆ ಸಿದ್ದಗೊಳಿಸಿ ಸಾಂಪ್ರದಾಯಿಕ ಚಿತ್ರಕಲೆ ರಚಿಸುವ ವಿಧಾನವನ್ನು ಅನುಸರಿಸಿರುವುದನ್ನು ಕಾಣಬಹುದು. ವಿಶೇಷವಾಗಿ ಹಂಪಿಯ ವಿರೂಪಾಕ್ಷ ದೇವಾಲಯದ ಮರಾಂಗಣದ ಮೇಲೆ ರಚಿಸಿ ಅವುಗಳಲ್ಲಿ ಪಚ್ಚೆರು ಜೋಡಣೆಗೆ ಮತ್ತ ದಾರಾವಹಿ ಕಥಾ ನಿರೂಪಕ ರೂಪದಲ್ಲಿ ಸಂಯೋಜಿಸಿದ್ದಾರೆ. ಇಲ್ಲಿನ ವಿಷಯಗಳು ಮನ್ಮಥನ ವಿಜಯ, ತ್ರಿಪುರ ಸಂಹಾರ ಇತ್ಯಾದಿ ಚಿತ್ರಗಳನ್ನು ದಶಾವತಾರದಲ್ಲಿ ಕಾಣಬಹುದು. ಇದೇ ಕಾಲಘಟ್ಟದಲ್ಲಿ ಬಿ.ಕೆ.ಹಳ್ಳಿಯ ರಾಮ ದೇವಾಲಯದ ಗೋಡೆಗಳ ಮೇಲೆ ಭಿತ್ತಿ ಚಿತ್ರಗಳನ್ನು ಕಾಣಹಬುದು. ಈ ಚಿತ್ರಗಳಲ್ಲಿ ದಶವಾತಾರದ ಅನೇಕ ಚಿತ್ರಗಳು

ಕಂಡು ಬಂದಿವೆ. ಇವುಗಳು ಸಹ ಸಾಂಪ್ರದಾಯಿಕ ವರ್ಣ ತಯಾರಿಕೆ ಚಿತ್ರಗಳ ರಚನೆ ವಿಧಿ-ವಿಧಾನಗಳಲ್ಲಿ ರಚಿತವಾಗಿದೆ. ಎಂಬುದನ್ನು ವಿಶ್ಲೇಷಣೆಗೆ ತಂದುಕೊಂಡು ಚರ್ಚಿಸಿದಾಗ ಉದಾಹರಣೆಗೆ ಲಕ್ಷ್ಮಿ ನರಸಿಂಹ ಚಿತ್ರವು ಇಲ್ಲಿನ ವಿಶೇಷವಾಗಿದ್ದು ರಾಮನ ಕಥೆಯ ಅವತಾರ ರೂಪಿಕೆಗಳು ಹೆಚ್ಚಾಗಿ ಚಿತ್ರಿತಗೊಂಡಿದೆ.

ಮುಂದುವರೆದು ಮೈಸೂರು ಶೈಲಿಯ ಭಿತ್ತಿಚಿತ್ರ ಕಲೆ ನೆಲೆಗಳಾದ ಚಾಮರಾಜನಗರ ಮೈಸೂರು ಸೀಭಿ ತುಮಕೂರು ನಾಗಮಂಗಲ ಶಿರಾ, ತಲಕಾಡು ಇತ್ಯಾದಿ ಪ್ರದೇಶಗಳ ದೇವಾಲಯಗಳಲ್ಲಿ ಅನೇಕ ದಶಾವತಾರ ಕಲ್ಪನೆಯ ವಿಷಯಗಳಲ್ಲಿ ಭಿತ್ತಿಚಿತ್ರಗಳು ರಚನೆಗೊಂಡಿವೆ. ಇವುಗಳಲ್ಲಿ ಚಿತ್ರ ರಚನೆ ಸಿದ್ಧಾಂತ ವಿಧಿ-ವಿಧಾನವು ಮೈಸೂರು ಶೈಲಿಯ ಚಿತ್ರಕಲೆಯನ್ನು ಪ್ರತಿಬಿಂಬಿಸಿ ಮೂಲ ಮೈಸೂರು ಮುಮ್ಮಡಿ ಕೃಷ್ಣರಾಜ ಒಡೆಯರ ಮನೆತನದ ದೈವ ವೈಷ್ಣವ ಧರ್ಮವಾಗಿದ್ದು ವಿಷ್ಣುವಿನ ದಶಾವತಾರದ ಪರಿಕಲ್ಪನೆಯ ಭಿತ್ತಿಚಿತ್ರಗಳನ್ನು ರಚಿಸುವುದಕ್ಕೆ ಪ್ರೇರಣೆ ನೀಡಲಾಗಿದೆ.

ಭಿತ್ತಿಚಿತ್ರಕಲೆಯ ಮಾಧ್ಯಮಕ್ಕೂ ಹಾಗೂ ಹಸ್ತಪ್ರತಿ ಮಾಧ್ಯಮಗಳಲ್ಲಿ ಅನೇಕ ವೈವಿಧ್ಯತೆಯನ್ನು ಕಾಣಬಹುದು. ದಶಾವತಾರದ ಭಿತ್ತಿಚಿತ್ರಕಲೆಯ ರಚನೆಯ ವಿಧಿ ವಿಧಾನಗಳು ಬೇರೆಯಾಗಿವೆ. ಜೊತೆಗೆ ಮಾಧ್ಯಮದ ಫಲಕವು ವೈವಿಧ್ಯತೆಗಳಿಂದ ಕೂಡಿದ್ದು ಕಂಡುಬರುತ್ತದೆ. ಆದರೆ ವಸ್ತು ವಿಷಯಗಳಲ್ಲಿ ಮಾತ್ರ ಒಂದೆಯಾಗಿರುತ್ತವೆ. ಅವೆಲ್ಲವು ವಿಷ್ಣುವಿನ ದಶಾವತಾರ ವಿಷಯಗಳಾಗಿರುತ್ತದೆ. ಭಿತ್ತಿಯ ಸಂಯೋಜನೆಯ ಬೇರೆ ಹಸ್ತಪ್ರತಿ ಚಿತ್ರ ಸಂಯೋಜನೆಯೇ ಬೇರೆಯಾಗಿದ್ದು. ಅಲ್ಲಿನ ರೇಖಾಚಿತ್ರ ರಚನೆ, ಬಣ್ಣಗಳ ಬಳಕೆ ಬಹಳ ವೈವಿಧ್ಯಮಯವಾಗಿ ಕಂಡುಬರುತ್ತವೆ, ವಿಜಯನಗರ ಶೈಲಿಯ ಹಸ್ತಪ್ರತಿಗಳಲ್ಲಿ ದೊರಕುವುದಿಲ್ಲ. ಆದರೆ ಭಿತ್ತಿಯ ರಚನೆಗೆ ಇವು ಸಹಾಯಕವಾಗಿರುವೆಂದು ಊಹಿಸಬಹುದು. ಆದರೆ ಮುಮ್ಮಡಿ ಕೃಷ್ಣರಾಜ ಒಡೆಯರು ೧೮ನೇ ಶತಮಾನದ ಸಂದರ್ಭದಲ್ಲಿ ರಚಿಸಲ್ಪಟ್ಟ ಸ್ವರಚಿತ ಹಸ್ತ ಪ್ರತಿಗಳಾದ ಸ್ವರ ಚೂಡಮಣಿ ಗಾದಿ ಪರಿಕರ, ಶ್ರೀ ತತ್ವನಿಧಿ ಚಾಮುಂಡೇಶ್ವರಿ ಮಹಿಮೆ ಇತ್ಯಾದಿ ಗ್ರಂಥಗಳನ್ನು ಮೈಸೂರಿನ ಒರಿಯಂಟಲ್ ಗ್ರಂಥಾಲಯದಲ್ಲಿ ದೊರಕುತ್ತವೆ. ಇವುಗಳಲ್ಲಿ ವಿಷ್ಣುವಿನ ದಶಾವತಾರದ ಪರಿಕಲ್ಪನೆಯ ಸಾವಿರಾರು ಹಸ್ತಪ್ರತಿ ಚಿತ್ರಗಳು ದೊರಕುವುತ್ತವೆ. ಇವು ಮೈಸೂರು ಶೈಲಿಯ ಚಿತ್ರಕಲೆಗಳಾಗಿವೆ. ಇವುಗಳು ರದ್ದಿ ಹಾಳೆಯ ಮೇಲೆ ರಚನೆಯಾಗಿದ್ದು, ತಾಳೆಗರಿಯ ಫಲಕ ಮರದ ಕಟ್ಟಿ ಇತ್ಯಾದಿಗಳ ಮೇಲೆ ರಚನೆಯಾಗಿದೆ. ಈ ಸಂದರ್ಭದಲ್ಲಿ ಕಲಾವಿದರ ಒಂದು ಓಣಿಯನ್ನು ನೀಡಿ ಅವರಿಗೆ ಈ ಚಿತ್ರಗಳನ್ನು ರಚಿಸುವಂತೆ ಪ್ರೋತ್ಸಾಹಿಸಲಾಗುತ್ತಿತ್ತು. ನಂತರ ಇಂತಹ ಚಿತ್ರಗಳನ್ನು ಭಿತ್ತಿಚಿತ್ರಗಳಿಗೆ ಬಳಸಿಕೊಂಡು ರಚಿಸಲಾಗಿತ್ತು. ಭಿತ್ತಿ ಹಾಗೂ ಹಸ್ತಪ್ರತಿ ಚಿತ್ರಗಳು ಈ ಕಾಲದಲ್ಲಿ ರಚಿಸಿದ್ದು. ಒಂದೇ ರೀತಿಯ ಚಿತ್ರಗಳಂತೆ ಭಿತ್ತಿಸಿರುವುದು ಕಾಣಬಹುದು. ವಸ್ತು ವಿಷಯಗಳಲ್ಲಿ ಒಂದು

ಸಾಮ್ಯತೆಯಿಂದ ಕೂಡಿವೆ. ಈ ಮಾಧ್ಯಮಗಳನ್ನು ತೌಲನಿಕವಾಗಿ ಅಭ್ಯಾಸ ನಡೆಸಿದಾಗ ಕಂಡುಬರುವ ಮೌಲ್ಯಯುಕ್ತ ಅಂಶಗಳೆಂದರೆ ವಸ್ತು ವಷಯಗಳು ಒಂದೇ ಆದರೆ ಮಾಧ್ಯಮ ಬೇರೆ ಚಿತ್ರರಚನೆಯ ವಿಧಿ-ವಿಧಾನಗಳನ್ನು ವ್ಯತ್ಯಾಸದಿಂದ ಕೂಡಿರುವುದನ್ನು ಗಮನಿಸಬೇಕು. ಆದರೆ ಮೈಸೂರು ಶೈಲಿಯಲ್ಲಿ ಎಲ್ಲವೂ ಒಂದೇ ಸಾಮ್ಯತೆ ಹತ್ತಿರ ಬರುವಂತೆ ಚಿತ್ರಿತವಾಗಿರುವುದನ್ನು ಗಮನಿಸಬಹುದು ಆದರೆ ಮಾಧ್ಯಮ ಬೇರೆಯಾಗಿರುತ್ತದೆ.

ಹಸ್ತಪ್ರತಿ ಚಿತ್ರಕಲೆಗಿಂತ ಸ್ವಲ್ಪ ಭಿನ್ನತೆಯಲ್ಲಿ ರಚಿತವಾದ ಮಾಧ್ಯಮವೆಂದರೆ ಗಂಜೀಫಾ ಚಿತ್ರಕಲೆ ಗಂಜೀಫಾ ಚಿತ್ರಕಲೆಯನ್ನು ಬಳಸಿಕೊಂಡು ಮುಮ್ಮಡಿ ಕೃಷ್ಣರಾಜ ಒಡೆಯರು ಆಟವನ್ನು ಆಡುತ್ತಿದ್ದರು. ಆ ಆಟದ ದಶಾವತಾರ ಅಥವಾ ಒಂದು ಕ್ರೀಡೆಯಾಗಿ ಬೆಳೆದ ಸಾಂಪ್ರದಾಯವನ್ನು ಕಾಣಬಹುದು. ಇವುಗಳ ಮೇಲೆ ವಿಷ್ಣುವಿನ ದಶಾವತಾರಕ್ಕೂ ಸಂಬಂಧಿಸಿ ಚಿತ್ರಗಳನ್ನು ರಚಿಸುತ್ತಿದ್ದರು. ಇದರ ಸಂಪೂರ್ಣ ಮಾಹಿತಿಯ ಶ್ರೀತತ್ವ ನಿಧಿ ಗ್ರಂಥದಲ್ಲಿ ಚಿತ್ರಿತ ರೂಪದಲ್ಲಿ ದೊರೆಯುತ್ತದೆ. ಈ ಮಾಧ್ಯಮ ರದ್ದಿ ಹಾಳೆಯ ಹಾಗೂ ಬಟ್ಟೆಯಗಳ ಮೇಲೆ ಗಂಜೀಫಾ ರೂಪದ ಬಟ್ಟೆಯನ್ನು ಅಂಟಿಸಿ ಅದರ ಮೇಲೆ ವಂಶ ಪರಂಪರಗತವಾಗಿ ಬರದ ಗಂಜೀಫಾ ಚಿತ್ರಕಲಾವಿದರು ಸಂಪ್ರಾದಾಯಿಕ ರೀತಿಯಲ್ಲಿ ಚಿತ್ರರಚಿಸುವ ವಿಧಿ-ವಿಧಾನ ಅಳವಡಿಸಿಕೊಂಡರು. ಇದರಲ್ಲಿ ದಶಾವತಾರದ ಅನೇಕ ವಯೋಮಾನದ ಕಲಾವಿದರು ಭಾಗಿಯಾಗುತ್ತಿದ್ದರು. ಇವುಗಳ ವಸ್ತು ವಿಷಯಗಳೆಂದರೆ ಮತ್ಸ್ಯ ಅವತಾರ, ಕೂರ್ಮಾವತಾರ, ವರಹ, ನರಸಿಂಹ, ವಾಮನ, ಪರುಶುರಾಮ, ರಾಮ, ಬಲರಾಮ, ಜಗನ್ನಾಥ, ಕಲ್ಕಿ ಚಿತ್ರಗಳನ್ನು ಬಳಸುತ್ತಿದ್ದರು. ಇವುಗಳು ಸಣ್ಣ ಗಾತ್ರದಿಂದ ಹಿಡಿದು ದೊಡ್ಡ ಗಾತ್ರದ ವೃತ್ತಾಕಾರದ ಕಾಡುಗಳನ್ನು ರಚಿಸುತ್ತಿದ್ದರು.

ಈ ಚಿತ್ರರಚನೆಗೆ ಕಣ್ಣು ಸೂಕ್ಷ್ಮವಾಗಿರಬೇಕಾಗಿತ್ತು. ಭಿತ್ತಿ ಚಿತ್ರಕ್ಕೂ ಹಸ್ತಪ್ರತಿ ಚಿತ್ರಕ್ಕಿಂತ ಬಹಳ ವ್ಯತ್ಯಾಸವಾಗುವ ರೀತಿಯಲ್ಲಿ ರಚಿಸುವ ವಿಧಿ-ವಿಧಾನಗಳನ್ನು ಅಳವಡಿಸಿಕೊಳ್ಳುತ್ತಿದ್ದರು. ಇವುಗಳನ್ನು ಆಟದ ಸಂದರ್ಭದಲ್ಲಿ ಹಾಗೂ ಮೈಸೂರು ಸಂಸ್ಥಾನಕ್ಕೆ ಭೇಟಿ ನೀಡಿದ ಅನೇಕ ರಾಜಮನೆತನದವರಿಗೆ ಕೊಡುಗೆಯಾಗಿ ನೀಡುತ್ತಿರುವ ಪದ್ಧತಿಯನ್ನು ತಿಳಿಯಬಹುದು. ಇದು ಪ್ರದರ್ಶನದ ಕಲೆಯಂತೆ ಕಂಡುಬಂದು ಈ ಶಾಲೆಯ ಸಂಚಾರ ರೂಪದಲ್ಲಿ ಪ್ರದರ್ಶಿತವಾಗಿ ದೊಡ್ಡಾಟ ಹಾಗೂ ಚಿಕ್ಕಾಟಗಳೆಂಬ ಇಸ್ಪೀಟ್ ಆಟಕ್ಕೆ ಚಿತ್ರರೂಪ ತಂದುಕೊಟ್ಟಂತಹ ಮಾಧ್ಯಮವಾಗಿರುತ್ತದೆ. ಜೊತೆಗೆ ದಶಾವಾತಾರದ ಪರಿಕಲ್ಪನೆಯ ಚಿತ್ರಗಳನ್ನು ಇತರರಿಗೆ ತಲುಪಿಸಿ ಧರ್ಮ ಗೌರವ ಹೆಚ್ಚಿಸಿ ಅಥವಾ ಉಳಿಸಿ-ಬೆಳೆಸುವ ಚಿತ್ರಕಲೆಯಾಗಿ ಕಂಡುಬರುತ್ತವೆ. ಇಂತಹ ಚಿತ್ರಗಳು ಮೈಸೂರಿನ ಜರಮೇಹಾನ ಶಾಲೆಯಲ್ಲಿ ಪ್ರದರ್ಶನಕ್ಕೆ ಇಡಲಾಗಿದೆ. ಹಾಗೂ ಈ ಸಾಂಪ್ರದಾಯವನ್ನೇ ಉಳಿಸಿಕೊಂಡು ಬಂದ ನಂತರ ಆಧುನಿಕ ಸಾಂಪ್ರದಾಯಸ್ಥ ಕಲಾವಿದರು ಕರ್ನಾಟಕದ ಗಂಜೀಫಾ ಚಿತ್ರಕಾರರಾದ ರಘುಪತಿಭಟ್ಟರವರ ಕಲಾಗ್ಯಾಲರಿಗಳಲ್ಲಿ ಇವರು

ಪ್ರವರ್ತಿಸಿ ಹಾಗೂ ಚಿತ್ರಗಳನ್ನು ಅದೇ ರೀತಿ ರಚಿಸಿಕೊಂಡು ಹೋಗುತ್ತಿರುವುದನ್ನು ಗಮನಿಸಬಹುದು.

ಒಟ್ಟಾರೆ ಹೇಳುವುದಾದರೆ ಈ ಗಂಜೀಫಾ ಕಲಾಶೈಲಿಯ ವಿಭಿನ್ನ ರೀತಿಯ ಆ ಮಾಧ್ಯಮದ ಕಲ್ಪನೆಯನ್ನು ಕಟ್ಟಿಕೊಡುತ್ತದೆ. ಬೇರೆ ಎಲ್ಲಾ ಮಾಧ್ಯಮಗಳಿಗಿಂತ ಭಿನ್ನ ರೂಪದಲ್ಲಿ ಚಿತ್ರಿತವಾಗಿರುವುದರನ್ನು ದಶಾವತಾರ ಪರಿಕಲ್ಪನೆಯಲ್ಲಿ ಕಾಣಬಹುದು. ಇಂತಹ ಕಾಲ್ಪನಿಕ ಅಧ್ಯಯನ ನಡೆಸಿದಾಗ ಕಂಡುಬರುವ ಮೂಲ ಅಂಶಗಳು ಮುಂದಿನ ಸಂಶೋಧಕರಿಗೆ ತೆರೆದ ಬಾಗಿಲುಗಳಾಗಿ ನಿಲ್ಲುವುದನ್ನು ಕಾಣಬಹುದು.

ದಶಾವತಾರ ಚಿತ್ರಗಳ ಪರಿಕಲ್ಪನೆಯ ತನ್ನದೇ ಆದ ಅನೇಕ ಮಾಧ್ಯಮಗಳನ್ನು ಹುಟ್ಟು ಹಾಕಿಕೊಂಡು ಕಲಾವಲಯದಲ್ಲಿ ಬೆಳೆದು ನಿಂತಿದೆ. ಹಾಗೂ ಜನಪದ ಕಲೆಗಳಲ್ಲಿ ಪ್ರವೇಶಿಸಿ ದಶಾವತಾರ ಚಿತ್ರಗಳು ಕಿನ್ನಾಳಕಲೆ, ಹಾಗೂ ಕಲಘಟಗಿ ಕಲೆಗಳಲ್ಲಿ ಮರದ ತೊಟ್ಟಿ, ಪೆಟ್ಟಿಗೆ, ಸಿಂಹಾಸನದ ಪ್ರಭಾವಳಿ ಅನೇಕ ದೇವಸ್ಥಾನದ ಅಲಂಕಾರಿಕ ವಸ್ತುಗಳ ಮೇಲೆ ರಥಗಳ ಬಾಗಿಲುಗಳ ಮೇಲೆ ವಿಷ್ಣುವಿನ ದಶಾವತಾರ ಚಿತ್ರಗಳು ವಿನಯೋತ್ತರ ಶೈಲಿಯ ರೂಪದಲ್ಲಿ ಚಿತ್ರಿತಗೊಂಡಿರುವುದನ್ನು ಕಾಣಬಹುದು. ಇವು ಜನಪದರು ಕಂಡಂತಹ ರೂಪಕ ಚಿತ್ರಗಳನ್ನು ಅನುಸರಿಸಿಕೊಂಡು ಶೈಲಿ ವರ್ಣಗಳನ್ನು ಬಳಸಿ ಸಾಂಪ್ರದಾಯಕ ಮತ್ತು ನೃತ್ಯ ಕಲಾವಿದರು ತಮ್ಮದೆ ಆದ ಗುರುಕುಲ ಮಾದರಿಯನ್ನು ನಿರ್ಮಿಸಿ ಅನೇಕ ವಂಶಪಾರಂಪರ್ಯ ಕಲಾವಿದರು ಚಿತ್ರಿಸಿರುವುದನ್ನು ಈ ವಿಷಯದ ಕುರಿತು ಕಿನ್ನಾಳಿಯ ಬಗ್ಗೆ ರವಿನಾಯಕ ಹಾಗೂ ಕಲಘಟಗಿ ಕಲೆಗಳನ್ನು ಕುರಿತು ಶಶಿಕಾಂತ ಬಸರಿಕಟ್ಟಿಯವರು ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಪ್ರಬಂಧಗಳಲ್ಲಿ ಹೆಚ್ಚಿನ ಮಾಹಿತಿಯನ್ನು ಗಮನಿಸಿದರೆ ತಿಳಿಯುತ್ತದೆ. ಇಲ್ಲಿನ ಚಿತ್ರಗಳು ಮೇಲೆ ತಿಳಿಸಿದ ಭಿತ್ತಿಚಿತ್ರ ಹಾಗೂ ಹಸ್ತಪ್ರತಿ ಚಿತ್ರಗಳನ್ನು ಸಾಲು ರೂಪದಲ್ಲಿ ರಚಿಸಿದರು. ಅಲ್ಲಿನ ನೈಸರ್ಗಿಕ ಬಣ್ಣಗಳೂ ಬಳಸದೆ ಆಧುನಿಕ ರಾಸಾಯನಿಕ ಬಣ್ಣಗಳನ್ನು ಬಳಸಿಕೊಂಡು ಚಿತ್ರಿಸಿರುವುದನ್ನು ಕಾಣಬಹುದು. ಈ ಚಿತ್ರರಚನೆಯ ಪೂರ್ವದಲ್ಲಿ ಮೊದಲು ಡ್ರೆಸಿಂಗ್ ಕಾಗದದ ಮೇಲೆ ಚಿತ್ರಗಳನ್ನು ರಚಿಸಿ ಯಾವುದೇ ತಪ್ಪುಗಳನ್ನು ಸರಿಪಡಿಸಿಕೊಂಡು ನಂತರದಲ್ಲಿ ಮರದ ಮೇಲೆ ಡ್ರೆಸಿಂಗ್ ಇಟ್ಟುಕೊಂಡು ನಕಲು ಮಾಡಿಕೊಂಡು ಚಿತ್ರಿಸುತ್ತಾರೆ. ನಂತರ ರಾಸಾಯನಿಕ ಬಣ್ಣಗಳನ್ನು ಚಿತ್ರಿಸಲಾಗುತ್ತದೆ. ಈ ಚಿತ್ರಗಳು ಶ್ರೇಷ್ಠಮಟ್ಟದ ಚಿತ್ರಕಲೆಯಾಗಿ ಪರಿಣಮಿಸಿದೆ. ದೇವರ ಆರಾಧನೆಗೆಂದು ಬಳಸಿಕೊಳ್ಳುವುದಾಗಿದೆ. ಭಿತ್ತಿಚಿತ್ರ ಹಸ್ತಪ್ರತಿಗಳಿಂದ ಕಡಿಮೆ ಗುಣಮಟ್ಟದ ಚಿತ್ರಕಲೆಯಂದು ಗುರುತಿಸಬಹುದು.

ಕಾಗದ ಮಾಧ್ಯಮವನ್ನು ತೌಲನಿಕವಾಗಿ ನೋಡಿದರೆ ಡ್ರೆಸಿಂಗ್ ಕಾಗದ ಮೇಲೆ ರಚಿಸಿದ ಪದ್ಧತಿಗೆ ಹಾಗೂ ರದ್ದಿ ಕಾಗದದ ಮೇಲೆ ಬಳಸಿದ ರೇಖಾಚಿತ್ರಕ್ಕೆ ಭಿನ್ನತೆ ಕಂಡುಬರುತ್ತದೆ.

ಕಲಾವಿದರಿಂದ ಸಂಶೋಧನೆಯಾದ ಶುಭಾರಾಯರ ಚಿತ್ರ ರೇಖಾಚಿತ್ರ ತಿಪ್ಪಜಪ್ಪನವರ ರೇಖಾಚಿತ್ರಗಳನ್ನು ಅಧ್ಯಯನಕ್ಕೆ ತಂದುಕೊಂಡರೆ ಇವರು ರಚಿಸಿದ ಬಹುತೇಕ ರೇಖಾಚಿತ್ರಗಳು ವಿಷ್ಣುವಿನ ದಶಾವತಾರ ಚಿತ್ರಗಳು ರೇಖಾಚಿತ್ರ ಹೇಗಿರುತ್ತವೆ ಇವು ಕೆಶ್ಚೇಪ ಶಿಲ್ಪಶಾಸ್ತ್ರದ ತಾಳಮಾನವನ್ನು ಅನುಸರಿಸುವಂತಹ ಚಿತ್ರಗಳಾಗಿದ್ದು ಪೆನ್ಸಿಲ್ ಪೆನ್ನುಗಳಿಂದ ರಚಿಸಿದ ರೇಖಾ ಚಿತ್ರವಾಗಿರುತ್ತದೆ. ಶ್ರೀ ತಿಪ್ಪಾಜಪ್ಪನವರ ರೇಖಾಚಿತ್ರಗಳು ಹೂ ಬಳ್ಳಿ ನಕ್ಷ ಚಿತ್ರಗಳನ್ನು ಬಳಸಿಕೊಂಡು ಹೆಚ್ಚು ಸಾಂಪ್ರದಾಯಕ ರೇಖಾಚಿತ್ರಕ್ಕೆ ಹೋಲುವಂತೆ ರಚಿಸಿದ ಚಿತ್ರಗಳಾಗಿವೆ. ಈ ಚಿತ್ರಗಳಲ್ಲಿ ಹೊಯ್ಸಳರ ಶೈಲಿಯಲ್ಲಿ ರಚಿಸಿದ ರೇಖಾಚಿತ್ರಗಳಂತೆ ಕಾಣುತ್ತವೆ. ಹಾಗೂ ಇವುಗಳು ಶಿಲ್ಪಕಲಾವಿದರಾದ ವಂದಿರಾಜ್ ರಚಿಸಿದಂತಹ ಚಿತ್ರಕ್ಕೆ ಹೋಲುವಂತಿದ್ದು ಕಂಡುಬರುತ್ತದೆ. ಇದೇ ರೀತಿಯ ಟಿಪ್ಪುವಿನ ಆಸ್ಥಾನದಲ್ಲಿ ಕಲಾವಿದರಾಗಿದ್ದ ಸಂತಶುಭರಾಯರ ಚಿತ್ರ ಕಲಾಕೃತಿಗಳು ಹಾಗೂ ರೇಖಾಚಿತ್ರ ಕಲಾಕೃತಿಗಳೆಲ್ಲವು ಸಾಂಪ್ರದಾಯಕವಾಗಿದ್ದು ಅವರ ವೈಯುಕ್ತಿಕ ಶೈಲಿಯನ್ನು ಪ್ರತಿಬಿಂಬಿಸುತ್ತಿವೆ. ಮರ ಮಾಧ್ಯಮದಲ್ಲಿ ರಚನ ರೇಖಾಚಿತ್ರಕಲೆಗಳು ಇಂತಹ ಕಲಾವಿದರ ರೇಖಾಚಿತ್ರಗಳನ್ನು ನಕಲು ಚಿತ್ರಗಳಾಗಿ ಒಂದೇ ರೀತಿ ಕಂಡರೆ ವರ್ಣಗಾರಿಕೆ ವಿಭಿನ್ನವಾಗಿರುವುದನ್ನು ಗಮನಿಸಬಹುದು.

ಒಟ್ಟಾರೆ ಈ ಎರಡು ಬಗೆಯ ಮಾಧ್ಯಮವನ್ನು ತೌಲನಿಕವಾಗಿ ಅಧ್ಯಯನ ಮಾಡಿ ನೋಡಿದರೆ ರೇಖಾಚಿತ್ರಗಳು ಪ್ರಮುಖ ಪಾತ್ರವನ್ನುವಹಿಸಿದ್ದು ಉಳಿದೆಲ್ಲ ಅಂಶಗಳು ವಿಭಿನ್ನವಾಗಿರುವುದನ್ನು ಗಮನಿಸಬಹುದು. ವಸ್ತುವಿಷಯ ಒಂದೇ ಮಾಧ್ಯಮಗಳು ಬೇರೆ, ರೇಖಾಚಿತ್ರರಚನೆ ಬೇರೆ ಬೇರೆಯಾಗುತ್ತದೆ ಎಂದು ಹೇಳಬಹುದು. ಇವು ವಿಶೇಷವಾಗಿ ಕೆಶ್ಚೇಪ ಶಿಲ್ಪಶಾಸ್ತ್ರದ ರೇಖಾ ಚಿತ್ರದ ವಿಧಾನದಿಂದಲೂ ಅನುಸರಿಸಿಕೊಂಡು ರಚಿಸಿದವರೆಂದು ಹೇಳಬಹುದು. ತನ್ನದೇಯಾದ ಧರ್ಮ ವೈಷ್ಣವ ಧರ್ಮವನ್ನು ಬೆಳೆಸಲು, ಉಳಿಸಿ ಪ್ರಚಾರಕ್ಕೆ ತಂದುಕೊಳ್ಳಲು ಕಲಾವಿದನಿಗೆ ಸಾಧ್ಯವಾದಂತಹ ತನ್ನದೆಯಾದೆ ಅನೇಕ ಮಾಧ್ಯಮಗಳನ್ನು ಬಳಸಿಕೊಂಡು ಬದುಕುತ್ತಿದ್ದಾನೆಂದು ಹೇಳಬಹುದು. ಇವೇ ಮುಂದೆ ಧರ್ಮದ ಇತಿಹಾಸ ಕಟ್ಟಿಕೊಡಲು ಧರ್ಮವು ಬೆಳೆದ ಪರಿಸರವನ್ನು ಗುರುತಿಸುವಲ್ಲಿ ಧರ್ಮದಿಂದ ತನ್ನ ಮೂಲಧರ್ಮ ತತ್ವವನ್ನು ಚಿತ್ರಗಳ ಮೂಲಕ ಪ್ರಚಾರಗೊಳಿಸಲು ದಶಾವತಾರ ರೂಪದಲ್ಲಿ ಕೃಷ್ಣ ರಾಮರಂತಹ ದೇವರ ಕುಲದವರಿಗೆ ಚಿತ್ರರೂಪ ಸೃಷ್ಟಿಸಿ ವೈಷ್ಣವರ ವಿಚಾರವನ್ನು ತಿಳಿಸಲು ಸಹಾಯಕವಾಗಿದೆ ಎಂದು ಹೇಳಬಹುದು.

ಮೇಲಿನ ಎಲ್ಲಾ ಮಾಧ್ಯಮದ ದಶಾವತಾರದ ಪರಿಕಲ್ಪನೆಯ ಚಿತ್ರಗಳು ತೌಲನಿಕವಾಗಿ ಅಧ್ಯಯನಕ್ಕೆ ಒಳಪಡಿಸಿದಾಗಿದೆ. ಒಂದು ಧರ್ಮ ಚಿತ್ರಕಲೆ ಯಾವ ಯಾವ ಮಾಧ್ಯಮವನ್ನು ಯಾವ-ಯಾವ ಕಾಲಘಟ್ಟದಲ್ಲಿ ಆಶ್ರಯಲಿದೆ ಒಳಲುತೆಂದು ಹಾಗೂ ಕಾಲದ ತುಳಿತಕ್ಕೆ ಸಿಕ್ಕು

ಕೆಲವು ರಚಿತವಾದ ಅನೇಕ ಚಿತ್ರಕಲೆಗಳು ನಶಿಸಿಹೋಗಿವೆ. ಮಾಧ್ಯಮದ ಆಧಾರದಲ್ಲಿ ಹೇಗೆ ಉಳಿದುಕೊಂಡು ಬಂದಿವೆ. ಭಿತ್ತಿ ಚಿತ್ರದಿಂದ ಹಸ್ತಪ್ರತಿ, ಕಾಗದ, ಮರ, ಮಾಧ್ಯಮದ ರೂಪದಲ್ಲಿ ಚಿತ್ರಿಸಿದ ವಿಧಿ-ವಿಧಾನದ ವ್ಯತ್ಯಾಸಗಳು ವಿಷಯವು ತಿಳಿದುಬರುತ್ತದೆ. ನಂತರ ಯಾವ-ಯಾವ ಕಾಲಕ್ಕೆ ಯಾವ ಯಾವ ರಾಜಮನೆತನಗಳು ಅವುಗಳನ್ನು ಉಳಿಸಿ, ಬೆಳಿಸಿ, ಪ್ರೋತ್ಸಾಹಿಸಿದ ಬಗ್ಗೆ, ಧರ್ಮ ಚಿತ್ರಕಲೆ ಹೀಗೆಲ್ಲಾ ಬದಲಾವಣೆಗಳನ್ನು ಒಂದು ಕಾಲಘಟ್ಟದಿಂದ ಮತ್ತೊಂದು ಕಾಲಘಟ್ಟಕ್ಕೆ ಕೊಂಡುಯ್ಯುತ್ತದೆ. ಇದರಿಂದ ಧರ್ಮದ ಚಿತ್ರಕಲೆಯ ಆಳವಾದ ಅಧ್ಯಯನ ಕೈಗೊಳ್ಳಲು ಸಹಾಯಕವಾಗಿವೆ ಎಂದು ಹೇಳಬಹುದು. ದಶಾವತಾರದ ಚಿತ್ರಕಲೆಯು ತನ್ನದೇಯಾದ ಪರಿಕಲ್ಪನೆಯನ್ನು ಹೆಚ್ಚಿಸಿ, ಉಳಿಸಿ ಬೆಳೆಸುವಂತೆ ವಿಧಾನವನ್ನು ತಿಳಿದುಕೊಳ್ಳಬಹುದು.

# ಅಧ್ಯಾಯ ೯

# ಸಮಾರೋಪ

ಕರ್ನಾಟಕದಲ್ಲಿ ಬರುವ ದಶಾವತಾರದ ಚಿತ್ರಗಳ ಸವಿಸ್ತಾರವಾದ ಅಧ್ಯಯನದ ಅಗತ್ಯ ಇದೆ. ಪ್ರಸ್ತುತ ಅಧ್ಯಯನದ ವಿಸ್ತಾರವು ಎಂ.ಫಿಲ್ ಅಧ್ಯಯಕ್ಕೆ ಪೂರಕವಾಗಿ ಈ ಅಧ್ಯಯನವನ್ನು ಕೈಗೊಂಡಿದ್ದು ಇಲ್ಲಿನ ಉಳಿದ ಚಿತ್ರಗಳ ಸಂರಕ್ಷಣೆ ನಮ್ಮೆಲ್ಲರ ಜವಾಬ್ದಾರಿಯಾಗಿದೆ. ಜಿಲ್ಲಾದ್ಯಂತ ದಶಾವತಾರದ ಚಿತ್ರಗಳು ಕಾಲ ಕಳೆದಂತೆಲ್ಲಾ ಮಾಯಾವಾಗುತ್ತಿದ್ದು ಅವುಗಳ ರಕ್ಷಣೆ ಕಾರ್ಯ ತುರ್ತಾದ ಅಗತ್ಯತೆ ಇದೆ. ಮೇಲೆ ಸೂಚಿಸಿದ ಕರ್ನಾಟಕದ ದಶಾವತಾರದ ಚಿತ್ರಗಳ ಕಣಜ ಅವುಗಳ ಸಂಪೂರ್ಣ ಪ್ರತ್ಯೇಕ ಅಧ್ಯಯನವನ್ನು ಕೈಗೊಳ್ಳಬಹುದಾದಷ್ಟು ವಿಷಯವನ್ನು ತನ್ನೊಡಲಲ್ಲಿ ತುಂಬಿಕೊಂಡು ಪ್ರಕೃತಿಯ ದಿನದಾಟಿದಲ್ಲಿ ದಿನೆ ದಿನೆ ಸೊರಗುತ್ತಿವೆ. ಇಂತಹ ಹಲವಾರು ಚಿತ್ರಗಳು ಈಗಾಗಲೇ ಹಾಳಾಗಿವೆ. ಚಿತ್ರಕಲಾ ಕ್ಷೇತ್ರವು ಅವುಗಳನ್ನು ಉಳಿಸುವ ಹಾಗೂ ಮುಂದಿನ ಪೀಳಿಗೆಗೆ ಮೀಸಲಿಡುವ ಜವಾಬ್ದಾರಿ ಹೆಚ್ಚಿದೆ. ಆದರೂ ದಶಾವತಾರದ ಚಿತ್ರಗಳ ಸಂರಕ್ಷಣೆಗೆ ಸರ್ಕಾರವು ಕೈಗೊಂಡಿರುವ ಕಾರ್ಯಕ್ರಮಗಳು ಸ್ವಾಗತಾರ್ಹ ಆದರೆ ಆ ಕಾರ್ಯಕ್ರಮಗಳು ದಶಾವತಾರದ ಚಿತ್ರಗಳ ರಕ್ಷಣೆಯಾಗಬೇಕೇ ಹೊರತು ಮಾರಕವಾಗಬಾರದು ಇದಕ್ಕೆ ಉದಾಹರಣೆಯಾಗಿ ಈ ಹಿಂದೆ ಕರ್ನಾಟಕದ ದಶಾವತಾರದ ಚಿತ್ರವು ರಾಸಾಯನಿಕ ಲೇಪನದಿಂದ ರಕ್ಷಣೆ ಕಾರ್ಯವನ್ನು ಪುರಾತತ್ವ ಇಲಾಖೆ ಬೆಂಗಳೂರು, ಇಲ್ಲಿ ಪ್ರಯೋಗ ಮಾಡಲಾಗಿದ್ದು ಇದರ ಪರಿಣಮವಾಗಿ ಚಿತ್ರಗಳು ತನ್ನ ಶಕ್ತಿಯನ್ನು ಇನ್ನಷ್ಟು ಕಳೆದುಕೊಂಡಿವೆ. ಈ ಕಾರಣ ನುರಿತ ಕಲಾವಿದರ ಕೊರತೆ, ನೈಸರ್ಗಿಕ ಬಣ್ಣಕ್ಕೆ ಹೊಂದಿಕೊಳ್ಳುವ ರಾಸಾಯನಿಕ ಅನಿಲ ಉತ್ತಮ ತಜ್ಞರು ಸರಿಯಾದ ಪ್ರಮಾಣದಲ್ಲಿ ಕಾರ್ಯನಿರ್ವಹಿಸದೇ ಇರುವುದು ಈ ಚಿತ್ರಗಳ ಆಯಸ್ಸು ಕಡಿಮೆಯಾಗಲು ಕಾರಣವಾಗಿದೆ.

ಈ ದಶಾವತಾರದ ಚಿತ್ರಗಳ ಸಂಸ್ಕೃತಿ ಪರಂಪರೆ, ಸಾಂಪ್ರದಾಯಕ ಆಧಾರದ ಮೇಲೆ ಜರುಗುವುದರಿಂದ ಆಯಾ ಜನಾಂಗದವರಲ್ಲಿ ಹರ್ಷೋಲ್ಲಾಸ ಒದಗಿಸುವುದು ಪ್ರಾದೇಶಿಕತೆಯ ತಿರುಳು ನಿಖರವಾಗಿ ವ್ಯಕ್ತಪಡಿಸುವಲ್ಲಿ ದಶಾವತಾರದ ಚಿತ್ರಗಳು ಪ್ರಮುಖ ಪಾತ್ರವಹಿಸುತ್ತವೆ. ಆದರೆ ಚಿತ್ರಗಳ ಶೈಲಿ ವರ್ಣವಿನ್ಯಾಸ ಕಥ ಸಂಯೋಜನೆ ಆಕೃತಿಗಳ ಸಂಯೋಜನೆ ಹಾಗು ಭಾರತದ ಚಿತ್ರ ಸ್ಥಳದ ಬಳಕೆ ಮತ್ತು ಇವುಗಳ ರಚನಾ ಕಾಲವನ್ನು ಒಂದೆಡೆ ಗಮನಿಸಿರುವುದು ಈ ಚಿತ್ರಗಳ ಕಾಲದಲ್ಲಿ ಸಮಕಾಲೀನ ಚಿತ್ರ ಶೈಲಿಗಳೊಂದಿಗೆ ಇವುಗಳಿಗಿದ್ದಿರಬಹುದಾದ ಸಂಬಂಧ-ಪ್ರಭಾವ ಅಥವಾ ಕೊಂಡುಕೊಳ್ಳುವಿಕೆಯ ಕುರಿತು ವಿಮರ್ಶಾತ್ಮಕವಾಗಿ ನೋಡುವ ಪ್ರಯತ್ನವು ಅವಶ್ಯಕವಾಗಿ ಆಗಬೇಕಾಗಿರುವುದರಿಂದ ಇದರ ಪ್ರಸ್ತುತ ಚಿತ್ರಗಳ ಬಗ್ಗೆ ಒಂದು ಪೂರ್ಣ ಚಿತ್ರ ದೊರೆತಂತಾಗುತ್ತದೆ ಎಂದು ಹೇಳಲಾಗಿದೆ.

ಇವುಗಳೆಲ್ಲವನ್ನು ಗಮನಿಸಿದರೆ ಕರ್ನಾಟಕದ ವ್ಯವಸ್ತೆಯಲ್ಲಿ ಅನೇಕ ವೈಷ್ಣವ ಧರ್ಮದ ಚಿತ್ರ ಶಿಲ್ಪಕಲೆ ವಸ್ತುಗಳನ್ನು ಗುರುತಿಸಲಾಗಿದೆ. ಇವುಗಳಲ್ಲಿ ವಿಷ್ಣುವಿನ ದಶಾವತಾರಕ್ಕೆ ಸಂಬಂಧಿಸಿದ ಅನೇಕ ಚಿತ್ರ ಶಿಲ್ಪಕಲೆಗಳು ಮೂಡಿಬರುತ್ತವೆ. ಪ್ರಾಚೀನ ಗ್ರಂಥಗಳಲ್ಲಿ ಇಂತಹ ಚಿತ್ರಗಳ ಬೆಳವಣಿಗೆಗೆ ಅನೇಕ ಧರ್ಮಾಶ್ರಯಗಳಾದ ರಾಜಾಶ್ರಯಗಳು ಮಾಂಡಲೀಕರು ಕಲಾವಿದರು ಇವುಗಳ ಪೋಷಣೆಗೆ ಸಹಾಯಕವಾಗಿ ನಿಂತಿದ್ದಾರೆ, ಇಂತಹ ವಿಷಯಗಳನ್ನು ಅನೇಕ ಭಿತ್ತಿ ಚಿತ್ರ, ಹಸ್ತಪ್ರತಿ, ಗಂಜೀಫಾ, ಕಿನ್ನಾಳ ಕಲೆ, ಕಲಘಟಗಿ ಕಲೆ, ಇತ್ಯಾದಿಗಳ ಮೇಲೆ ರಚನೆಯಾಗಿಸುವುದನ್ನು ವಿಶೇಷವಾಗಿ ಗಮನಿಸಲಾಗಿದೆ. ಇವು ಕರ್ನಾಟಕದ ಧರ್ಮ, ಸಾಂಸ್ಕೃತಿಕ ನೆಲೆಗೆ, ಚಾರಿತ್ರಿಕವಾಗಿ ಬೆಳಕು ಕಾಣುತ್ತಿವೆ. ಇವುಗಳ ಸಂಶೋಧನೆ ಅಗತ್ಯವಿದೆ ಎಂದು ಹೇಳುವುದನ್ನು ಇತಿಹಾಸಕಾರರು ಮರೆಯುವಂತಿಲ್ಲ. ಇದರಲ್ಲಿ ದೃಶ್ಯಕಲೆ ಕಲೆಯಾಗಿ ಉಗಮಿಸಿ ಇನ್ನೊಂದು ಪರಂಪರೆಗೆ ಕಲೆಯ ಆಸ್ತಿಯಾಗಿ ಉಳಿದು, ಬೆಳಸಿಕೊಂಡು ಹೋಗಲು ಉಪಯುಕ್ತವಾಗುತ್ತದೆ ಎಂದು ಹೇಳಲಾಗಿದೆ. ಇದು ಕರ್ನಾಟದಾದ್ಯಂತ ಇರುವ ದಶಾವತಾರದ ಚಿತ್ರಗಳ ಕಡೆಗೆ ಗಮನ ಹರಿಸಿ ಅವುಗಳ ಸಂರಕ್ಷಣೆಯನ್ನು ಮಾಡುವುದು ಇಂದು ಅತ್ಯಂತ ಅಗತ್ಯವಾದ ಕಾರ್ಯಕ್ರಮವಾಗಿದೆ.

**ಮೊದಲನೆಯ ಅಧ್ಯಾಯವು** ಅಧ್ಯಯವನ್ನು ಪ್ರಾರಂಭ ಮಾಡಿದ ಉದ್ದೇಶ ಚಿತ್ರಕಲೆಯ ಉಗಮದ ಬಗ್ಗೆ ಸಂಕ್ಷಿಪ್ತ ವಿವರ ನೀಡುವುದರ ಜೊತೆಗೆ ಕರ್ನಾಟಕದ ಜಿಲ್ಲೆಯ ದಶಾವತಾರದ ಚಿತ್ರಗಳು ಹಾಳಾಗುತ್ತಿರುವ ಹಿನ್ನೆಲೆಯಲ್ಲಿ ಅವುಗಳ ಛಾಯ ಚಿತ್ರಣ ಮತ್ತು ವಿವರಣೆಯನ್ನು ಒಂದಡೆ ಕಟ್ಟಿಕೊಡುವ ಉದ್ದೇಶ ಮತ್ತು ಅಧ್ಯಯನದ ಸ್ವರೂಪ ವಿವಿಧತೆಗಳಿಂದ ಕೂಡಿರುವುದರ ಬಗ್ಗೆ ದಶಾವತಾರದ ಚಿತ್ರದ ವ್ಯಕ್ತಿಯು ವಿಸ್ತೃತವಾಗಿದ್ದು ಪ್ರಸ್ತುತ ಅಧ್ಯಯನಕ್ಕೆ ಕರ್ನಾಟಕದ ಆರು ಜಿಲ್ಲೆಯನ್ನು ಮಾತ್ರ ಮೀಸಲಿರಿಸಿಕೊಂಡಿದ್ದೇನೆ ಹಾಗೂ ಕ್ಷೇತ್ರ ಕಾರ್ಯದ ಮೂಲಕ ಅನಾವರಣಗೊಳಿಸಲಾಗಿದೆ.

**ಎರಡನೆಯ ಅಧ್ಯಾಯವು** ಕರ್ನಾಟಕದ ಜಿಲ್ಲೆಯ ದಶಾವತಾರದ ಚಿತ್ರಗಳ ಐತಿಹಾಸಿಕ ಹಿನ್ನೆಲೆ ಹೇಳುತ್ತಾ ಪಾಶ್ಚಾತ್ಯ ಹಾಗೂ ಭಾರತ ಮತ್ತು ಕರ್ನಾಟಕದ ಬೆಳವಣಿಗೆ ಹೊಂದಿದ ಬಗೆಯನ್ನು ಕುರಿತು ಒಂದು ಸ್ಥೂಲವಾದ ನೋಟವನ್ನು ಕಟ್ಟಿಕೊಡಲಾಗಿದೆ. ಕರ್ನಾಟಕದಲ್ಲಿನ ಪರಿಸರ ಭೌಗೋಳಿಕ ಸ್ಥಿತಿಗತಿ ಅವುಗಳನ್ನು ಪರಿಚಯಿಸುತ್ತ ಚಿತ್ರಕಲೆ, ಜನಪದ ಕಲೆ ಸಾಹಿತ್ಯ ಮತ್ತಿತರ ಕ್ಷೇತ್ರಗಳಲ್ಲಿ ತನ್ನದೇ ಆದ ಮಹತ್ವವನ್ನು ಹೊಂದಿದೆ. ಅದೇ ರೀತಿಯಾಗಿ ರಾಜ್ಯ ಮತ್ತು ಅಂತರಾಷ್ಟ್ರದಲ್ಲಿ ಗುರುತಿಸಿಕೊಂಡಿದೆ ಎಂಬುದರ ವಿಷಯದ ಬಗ್ಗೆ ವಿಮರ್ಶಾತ್ಮಕವಾಗಿ ಚರ್ಚಿಸಲಾಗಿದೆ.

**ಮೂರನೆಯ ಅಧ್ಯಾಯವು** ಕರ್ನಾಟಕದಲ್ಲಿ ದಶಾವತಾರದ ಭಿತ್ತಿ ಮಾಧ್ಯಮದ ಚಿತ್ರಗಳು ರಚನೆಗೊಂಡಿರುವುದು ಹಂಪಿ, ಮೈಸೂರು, ಸಿಭಿ, ಗಂಜೀಫಾ, ಹಸ್ತಪ್ರತಿ ಮಾಧ್ಯಮ ಅಂತವುಗಳ ನೆಲೆಗಳ ವಿವರ ಈ ಪ್ರದೇಶಗಳು ಹಿಂದಿನಿಂದ ಹೇಗೆ ಗುರುತಿಸಿಕೊಂಡು ಬಂದಿವೆ. ಹಂಪಿ, ಮೈಸೂರು, ಶಿರಾ ಹೀಗೆ ಹಲವಾರು ಪ್ರದೇಶ ದೇವಾಲಯಗಳನ್ನು ಮಠ, ಮಸೀದಿ ಪುರಾಣಕ್ಕೆ ಸಂಬಂಧಿಸಿದ ದೇವಾಲಯಗಳಲ್ಲಿ ಜಿಲ್ಲಾದ್ಯಂತ ದಶಾವತಾರದ ಚಿತ್ರಗಳು ಅಲ್ಲಿನ ಚಿತ್ರಗಳ ವಿವರ ರೇಖೆ, ಬಣ್ಣ ಸಂಯೋಜನೆಯ ಶೈಲಿ, ಹೀಗೆ ಮುಂತಾದ ಚಿತ್ರಗಳ ಕುರಿತು ಗ್ರಂಥಗಳಲ್ಲಿ ವಿಶ್ಲೇಷಿಸಲಾಗಿದೆ.

**ನಾಲ್ಕನೆಯ ಅಧ್ಯಾಯವು** ದಶಾವತಾರದ ಹಸ್ತಪ್ರತಿ ಮಾಧ್ಯಮ ನೆಲೆಯಲ್ಲೂ ಒಂದಲ್ಲಾ ಒಂದು ಧರ್ಮದ ಪ್ರಭಾವ ಇದ್ದೇ ಇರುತ್ತದೆ. ಅದೇ ರೀತಿ ದಶಾವತಾರದ ಚಿತ್ರಗಳಲ್ಲಿ ವೈಷ್ಣವ ಧರ್ಮಗಳ ಪ್ರಭಾವ ಹೆಚ್ಚಾಗಿ ಕಂಡು ಬಂದಿರುವುದು ವಸ್ತುವಿಷಯವು ಬೇರೆ ಬೇರೆ ನೆಲೆಗಳಲ್ಲಿದ್ದರೂ ಒಂದರಿಂದ ಮತ್ತೊಂದಕ್ಕೆ ಹೇಗೆ ಭಿನ್ನವಾಗಿದೆ. ಪುರಾಣ, ಕಥೆ, ಶೈಲಿ, ಸಂಯೋಜನೆ ರೇಖೆ, ಮುಂತಾದ ಚಿತ್ರಗಳನ್ನು ಕುರಿತು ಚರ್ಚಿಸಲಾಗಿದೆ.

**ಐದನೆಯ ಅಧ್ಯಾಯವು** ಕರ್ನಾಟಕದಲ್ಲಿ ದಶಾವತಾರದ ಚಿತ್ರಗಳು ಗಂಜೀಫಾ ಮಾಧ್ಯಮವು ಮೈಸೂರು ಶೈಲಿ ಚಿತ್ರಗಳಾಗಿವೆ. ಕಾಗದದ ಮೇಲಿನ ಮರಗಳ ಮೇಲಿನ ಚಿತ್ರಗಳು ವೈಷ್ಣವ ಧರ್ಮದ ದಶಾವತಾರದ ಚಿತ್ರಗಳು ಕಂಡು ಬಂದಿರುವುದು. ಇಲ್ಲಿಯೂ ಸಹ ವಿಶೇಷವಾಗಿ ವೈಷ್ಣವ ಧರ್ಮಿಯರ ಪ್ರಭಾವ ಹೆಚ್ಚಾಗಿ ಕಂಡುಬರುತ್ತದೆ. ಶ್ರೀಮಂತ ವರ್ಗದವರ ಮನೆಯಲ್ಲಿ, ಮಠ, ಕಲಾವಿದರ ಮನೆಯಲ್ಲಿ ಚಿತ್ರಗಳು ರಚನೆಯಾಗಿದ್ದು ಅದೇ ರೀತಿಯ ಬಣ್ಣಗಳ ತಯಾರಿಕೆ, ತಂತ್ರಗಾರಿಕೆ, ಇಲ್ಲಿ ವಿಶೇಷವಾಗಿ ಕಂಡುಬರುತ್ತವೆ. ಬೇರೆ ಬೇರೆ ಕಲಾವಿದರ ಕಲಾಕೃತಿಗಳ ಕುರಿತು ಚರ್ಚಿಸಲಾಗಿದೆ.

**ಆರನೆಯ ಅಧ್ಯಾಯವು** ದಶಾವತಾರದ ಚಿತ್ರಗಳ ಕಾಗದ ಮಾಧ್ಯಮ, (ರದ್ದಿಹಾಳೆ) ರೇಖಾ ಚಿತ್ರಗಳು ಕಿನ್ನಾಳ ಕಲಾವಿದರು ರಚಿಸುತ್ತಾರೆ. ಹಾಗೂ ಕಾವಿ ರೇಖಾಚಿತ್ರಗಳು

ದಶಾವತಾರದ ಬಗ್ಗೆ ಚಿತ್ರಿಸಿದ್ದಾರೆ. ಅವರು ಹೊಂದಿದ ವಾಸ್ತವ ಬದುಕಿನಲ್ಲಿ ಚಿತ್ರಿಸಿದ ವೃತ್ತಿ ಬದುಕಿನ ಚಿತ್ರಣಗಳನ್ನು ಇಲ್ಲಿ ಮುಂತಾದ ದೃಶ್ಯಗಳನ್ನು ಚರ್ಚಿಸಲಾಗಿದೆ.

**ಏಳನೆಯ ಅಧ್ಯಾಯದಲ್ಲಿ** ದಶಾವತಾರದ ಚಿತ್ರಗಳು, ಮರ ಮಾಧ್ಯಮ, ಹಸ್ತಪ್ರತಿಯ ತಾಳೆಮರದ ಫಲಕದ ಮೇಲಿನ ಚಿತ್ರಗಳು ಮತ್ತು ಪರಿಸರವು ತಮ್ಮ ಕಲಾಕೃತಿಗಳ ಮೂಲಕ ಚಿತ್ರ ರಚನೆಗೊಂಡಿರುವುದು ಇಲ್ಲಿ ಕಾಣಬಹುದಾಗಿದೆ. ಕಲಘಟಗಿ ಕಲೆಯ ಕಲಾವಿದ ತಮ್ಮ ಮಾಧ್ಯಮದಿಂದ ಅವರ ಕಲಾ ಕೃತಿಗಳು ಇಂದಿಗೂ ಸಿಗುತ್ತವೆ. ಅವರ ಬದುಕಿನ ವ್ಯವಸ್ಥೆಯನ್ನು ಧರ್ಮದ ಆಧಾರದ ಮೇಲಿನ ಚಿತ್ರಗಳ ರಚನೆಗೊಂಡಿವೆ. ಕಲಾವಿದರ ಪ್ರಾದೇಶಿಕ ಹಿನ್ನೆಲೆ ಚಿತ್ರರಚನೆಗೆ ಕಾರಣ ನೈಸರ್ಗಿಕ ಬಣ್ಣ, ಚಿತ್ರ ರಚನೆ ಮಾಡಲು ವ್ಯವಸ್ಥಿತವಾದ ಸ್ಥಳದ ಚಿತ್ರಗಳ ಬಗ್ಗೆ ಚರ್ಚಿಸಲಾಗಿದೆ.

**ಎಂಟನೆಯ ಅಧ್ಯಾಯವು** ಈ ಮೇಲಿನ ಎಲ್ಲಾ ಮಾಧ್ಯಮದಲ್ಲಿನ ದಶಾವತಾರದ ಚಿತ್ರಗಳ ತೌಲನಿಕ ಅಧ್ಯಯನವಾಗಿದೆ. ಇಲ್ಲಿ ವಸ್ತು ವಿಷಯ ಒಂದೊಂದು ಮಾಧ್ಯಮದ ಚಿತ್ರಗಳನ್ನು ಹೋಲಿಕೆಗಳ ಮೂಲಕ ಯಾವ ಯಾವ ರೀತಿಯ ವರ್ಣಗಳ ಬಳಕೆ, ತಂತ್ರಗಾರಿಕೆ, ಸಂಯೋಜನೆ ವಿಶೇಷವಾಗಿ ಕಂಡುಬರುತ್ತದೆ ಎಂಬುದನ್ನು ಚರ್ಚಿಸಲಾಗಿದೆ.

**ಒಂಭತ್ತನೆ ಅಧ್ಯಾಯವು** ಸಮಾರೋಪವಾಗಿದ್ದು, ಸಂಶೋಧನ ಸಂಪ್ರಬಂಧದ ಸಾರಾಂಶ ಹೊಸ ಹೊಳಹುಗಳು ಹಾಗೂ ಮುಂದಿನ ಅಧ್ಯಯಕ್ಕೆ ಅನುಕೂಲವಾಗುವ ಮಾಹಿತಿಯನ್ನು ಕೊಡುವುದಾಗಿದೆ. ಮೇಲಿನ ಒಟ್ಟು ಒಂಭತ್ತು ಅಧ್ಯಾಯಗಳಲ್ಲಿ ಕಂಡುಬರುವ ಫಲಿತಗಳನ್ನು ಸ್ಥೂಲವಾಗಿ ಸಮೀಕ್ಷಿಸಲಾಗಿದೆ.

## ಅಧ್ಯಯನದ ಫಲಿತಗಳು

ಈ ಅಧ್ಯಯನದ ವಿಷಯವಾದ "ಕರ್ನಾಟಕದ ಚಿತ್ರಕಲೆಯಲ್ಲಿ ದಶಾವತಾರದ ಕಲ್ಪನೆ" ಎಂಬ ವಿಷಯವನ್ನು ಕುರಿತು ಅಧ್ಯಯನ ಮಾಡಲಾಗಿದ್ದು, ಪ್ರಸ್ತುತ ಅಧ್ಯಯನದ ಕಂಡುಕೊಂಡಂತಹ ಫಲಿತಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

೧. ದಶಾವತಾರದ ಚಿತ್ರಗಳ ಅಧ್ಯಯನ ಮಾಡುವ ಸಂದರ್ಭದಲ್ಲಿ ದಶಾವತಾರದ ಚಿತ್ರಗಳ ರಚನೆಯ ಐತಿಹಾಸಿಕ ಹಿನ್ನೆಲೆಯನ್ನು ಹೇಗೆ ಅಧ್ಯಯನ ಮಾಡಬೇಕೆಂದು ಮತ್ತು ಅವುಗಳು ಎಂತಹ ಮಹತ್ವದ ಪಾತ್ರವಹಿಸುತ್ತವೆ ಎಂಬುದು ತಿಳಿದು ಬರುತ್ತದೆ.

೨. ಕರ್ನಾಟಕದಲ್ಲಿ ದಶಾವತಾರದ ಚಿತ್ರಗಳ ರಚನೆಯ ಪ್ರತಿಬಿಂಬಿಸುವುದು ಅದರ ಪರಂಪರೆಯಿಂದ ಬೆಳವಣಿಗೆ ಹಾಗೂ ಅವುಗಳ ಧಾರ್ಮಿಕ ವಿಧಿ-ವಿಧಾನಗಳಲ್ಲಿ ದಶಾವತಾರದ ಚಿತ್ರಗಳನ್ನು ಸಂಶೋಧನಾತ್ಮಕವಾಗಿ ಕಾಣಬಹುದಾಗಿದೆ.

೩. ಅಧ್ಯಯನದಲ್ಲಿ ಮುಖ್ಯವಾಗಿ ಗ್ರಹಿಸುವಂತಹದ್ದು ದಶಾವತಾರದ ಚಿತ್ರ ರಚನೆಯ ನಿರ್ಮಾಣ ಮುಖ್ಯವಾಗಿ ಕಲೆಗೆ ನೀಡುವಂತಹ ಅಪಾರವಾದ ಚಿತ್ರಗಳ ಕೊಡುಗೆಗಳು ಈ ಅಧ್ಯಯನದಲ್ಲಿ ಮಹತ್ವದ ಅಂಶಗಳಾಗಿ ಕಂಡುಬರುತ್ತವೆ.

೪. ದಶಾವತಾರದ ಚಿತ್ರಗಳ ಕಲಾವಿದರು ಬದಲಾದ ಪರಿಸ್ಥಿತಿಯಲ್ಲಿ ತಮ್ಮ ಕಲೆಗಳಲ್ಲಿ ವಿಭಿನ್ನತೆಯನ್ನು ಮೈಗೂಡಿಸಿಕೊಂಡು ಮೂಲದಲ್ಲಿದ್ದ ಕಲೆಯನ್ನು ಬಿಟ್ಟು ಆಧುನಿಕತೆಗೆ ತಕ್ಕಂತೆ ಚಿತ್ರಗಳ ನಿರ್ಮಾಣದಲ್ಲಿ ತೊಡಗಿರುವುದು ಕಂಡು ಬರುತ್ತದೆ. ಈ ಕಲೆಯ ಪರಿವರ್ತನೆಯ ಬೆಳವಣಿಗೆ ಪಡಿದುಕೊಳ್ಳುತ್ತದೆ ಎಂದು ಅಧ್ಯಯನದ ಮೂಲಕ ತಿಳಿದುಕೊಳ್ಳಲಾಗಿದೆ.

೫. ಕರ್ನಾಟಕದ ದಶಾವತಾರದ ಚಿತ್ರಗಳ ಬೆಳವಣಿಗೆಗೆ ಕೇವಲ ರಾಜ ಮಹಾರಾಜರಲ್ಲದೇ ಸಂಸ್ಥಾನಿಕರು, ಪಾಳೆಗಾರರು, ಅಧಿಕಾರಿಗಳು, ಶ್ರೀಮಂತರು, ಮಠ ಮಾನ್ಯದ ಸ್ವಾಮೀಜಿಗಳು, ಸಾಮಾನ್ಯ ಜನರೂ ಸಹಿತ ಪ್ರೋತ್ಸಾಹ ನೀಡಿ ಬೆಳೆಸಿರುವುದು ಇಲ್ಲಿ ಕಂಡುಬರುತ್ತದೆ.

೬. ಕರ್ನಾಟಕದ ದಶಾವತಾರದ ಚಿತ್ರಗಳಲ್ಲಿ ಹಲವು ಧರ್ಮಗಳಿಗೆ ಸಂಬಂಧಪಟ್ಟ ಚಿತ್ರಗಳು ರಚನೆಯಾಗಿವೆ. ವೈಷ್ಣವ ಧರ್ಮಗಳಿಗೆ ಸಂಬಂಧಿಸಿದ ಚಿತ್ರಗಳು ಇಲ್ಲಿವೆ. ಅಲ್ಲದೆ ಒಂದು ಧರ್ಮಕ್ಕೆ ಸಂಬಂಧಪಟ್ಟ ಚಿತ್ರ ನೆಲೆಯಲ್ಲಿ ಮತ್ತೊಂದು ಧರ್ಮದ ಚಿತ್ರಗಳನ್ನು ರಚಿಸುವ ಮೂಲಕ ಈ ಪ್ರದೇಶದ ಜನರು ಧಾರ್ಮಿಕ ಸಮನ್ವಯತೆಯನ್ನು ಮೆರೆದಿದ್ದಾರೆ.

ಪ್ರಸ್ತುತ ಅಧ್ಯಯನವು ಕರ್ನಾಟಕದ ದಶಾವತಾರದ ಚಿತ್ರಗಳಿಗೆ ಸಂಬಂಧಪಟ್ಟಿದ್ದಾದರೂ ಸಹಿತ ಅದರ ಜೊತೆಗೆ ಪೂರಕವಾಗಿ ಐತಿಹಾಸಿಕ, ರಾಜಕೀಯ, ಸಾಮಾಜಿಕ, ಮತ್ತು ಸಾಂಸ್ಕೃತಿಕ ಅಂಶಗಳನ್ನು ಪ್ರತಿಬಿಂಬಿಸುವಂತೆ ಈ ಅಧ್ಯಯನವನ್ನು ಜನಸಮೂದಾಯದ ಹಿನ್ನೆಲೆಯಲ್ಲಿ ರೂಪಿಸಲಾಗಿದೆ. ಇದು ಕಲಾತ್ಮಕ ಅಧ್ಯಯನವಾಗಿದ್ದರೂ ಅದರ ಹಿನ್ನೆಲೆಯಲ್ಲಿ ಮೇಲಿನ ಎಲ್ಲಾ ಅಂಶಗಳು ಅನಾವರಣಗೊಂಡಿವೆ. ಜೊತೆಗೆ ಕಲೆಯ ಸಂಗತಿಗಳಾದ ಬಣ್ಣ ರೇಖಾ, ಸಂಯೋಜನೆಯ ತಾಂತ್ರಿಕತೆ ಮುಂತಾದ ಅಂಶಗಳು ಹೆಚ್ಚಿನ ಪ್ರಮಾಣದಲ್ಲಿ ಬೆಳಕು ಕಂಡಿವೆ. ಅದರ ಜೊತೆಗೆ ಧಾರ್ಮಿಕ ಹಿನ್ನೆಲೆ ಚಿತ್ರಗಳ ರಚನೆಯಲ್ಲಿ ಅಂದಿನ ನಿತ್ಯದ ಜನಜೀವನ ಇವೆಲ್ಲವುಗಳು ಈ ಅಧ್ಯಯನದಲ್ಲಿ ಪರೋಕ್ಷವಾಗಿ ತೆರೆದುಕೊಂಡಿವೆ. ಆದರೂ ಸಹಿತ ಸಮಯ ಮತ್ತು ಅಧ್ಯಯನ ಮಿತಿಯು ಇದಕ್ಕಿರುವುದರಿಂದ ಕೇವಲ ಒಂದು ಹಂತದ ಸ್ಥೂಲವಾದ ಅಧ್ಯಯನವನ್ನು ಮಾತ್ರ ಇಲ್ಲಿ ಕೈಗೊಳ್ಳಲಾಗಿದೆ. ಈ ಅಧ್ಯಯನವು ಕರ್ನಾಟಕದ ಮಾದರಿಗಳನ್ನು ಮಾತ್ರ ಅನುಸರಿಸರಿದೆ. ಇನ್ನೂ ಸಮಗ್ರವಾಗಿ ಅಧ್ಯಯನವಾಗಬೇಕಾಗಿದೆ. ಈ ದಿಶೆಯಲ್ಲಿ ಇದೊಂದು ಸಣ್ಣ ಪ್ರಯತ್ನವಾಗಿದೆ.

# ಗ್ರಂಥಋಣ


| ಕ್ರ.ಸಂ. | ಗ್ರಂಥದ ಹೆಸರು | ಲೇಖಕರು/ಸಂಪಾದಕರು |
|---|---|---|
| ೦೧. | ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ<br>ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦. | ಡಾ. ಯಾದಪ್ಪ ಪರದೇಶಿ, |
| ೦೨. | ಕರ್ನಾಟಕ ಜನಪದ ಚಿತ್ರಕಲೆ<br>ಪಿಎಚ್.ಡಿ. ಮಹಾಪ್ರಬಂಧ<br>ಪ್ರ: ವೀರಶೈವ ಅಧ್ಯಯನ ಸಂಸ್ಥೆ<br>ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ<br>ಗದಗ, ೧೯೯೩ | ಡಾ. ಎಸ್.ಸಿ.ಪಾಟೀಲ, |
| ೦೩. | ಕನ್ನಡ ಹಸ್ತಪ್ರತಿಗಳು<br>ಪಿಎಚ್.ಡಿ. ಮಹಾಪ್ರಬಂಧ,<br>ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ<br>೧೯೮೭. | ಡಾ.ಬಿ.ಕೆ.ಹಿರೇಮಠ, |
| ೦೪. | ಕರ್ನಾಟಕ ಹಸ್ತಪ್ರತಿ ಚಿತ್ರಕಲೆ<br>ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ,<br>ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫. | ಡಾ.,ಎಚ್.ಎನ್. ಚಿತ್ರಗಾರ, |
| ೦೫. | ಕರ್ನಾಟಕ ಮುಸ್ಲಿಂ ಅರಸರ ಕಾಲದ<br>ಚಿತ್ರಕಲೆ : ಒಂದು ಅಧ್ಯಯನ,<br>ಪಿಎಚ್.ಡಿ. ಮಹಾಪ್ರಬಂಧ,<br>ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪. | ಡಾ. ವ್ಹಿ.ಎಂ.ಬಾಗಯತ್ |
| ೦೬. | ಕರ್ನಾಟಕದ ಜನಪದ ಶಿಲ್ಪಕಲೆ<br>ಪಿಎಚ್.ಡಿ. ಮಹಾಪ್ರಬಂಧ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦. | ಡಾ. ಶಿವಾನಂದ ಬಂಟನೂರು, |
| ೦೭. | ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ,<br>ಅಪ್ರಕಟಿತ ಡಿ.ಲಿಟ್. ಮಹಾಪ್ರಬಂಧ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫ | ಡಾ. ಆನಂದ ಕೆ. ಪೂಜಾರ, |

೦೮. ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ — ಕೆ.ಪಿ.ಕಾಳೆ,
ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೦೯. ಕಲಘಟಗಿ ಕಲೆ : ಒಂದು ಅಧ್ಯಯನ — ಶಶಿಕಾಂತ ಬಸರಿಕಟ್ಟಿ,
ಅಪ್ರಕಟಿತ ಎಂ.ಫಿಲ್. ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೧೦. ಕರ್ನಾಟಕ ಭಿತ್ತಿಚಿತ್ರ ಪರಂಪರೆ — ಡಾ. ಅ.ಲ.ನರಸಿಂಹನ್,
ಪ್ರ: ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು, ೧೯೯೮.

೧೧. ಕರ್ನಾಟಕ ದೇವಾಲಯ ಕೋಶ (ಬಳ್ಳಾರಿ ಜಿಲ್ಲೆ) — ಡಾ. ಕೆ.ಎಂ.ಸುರೇಶ,
ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ, ೧೯೯೯.

೧೨. ಕಿನ್ನಾಳ ಕಲೆ : ಒಂದು ಅಧ್ಯಯನ — ರವಿ ವಸರಾಮ ನಾಯಕ,
ಅಪ್ರಕಟಿತ ಎಂ.ಫಿಲ್. ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೧೩. ಕಲಾ ಪ್ರಪಂಚ — ಡಾ. ಶಿವರಾಂ ಕಾರಂತರ,
ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೨೮

೧೪. ಜೈನ ಹಸ್ತಪ್ರತಿಗಳು : ಒಂದು ಅಧ್ಯಯನ — ಉಮೇಶ್
ಅಪ್ರಕಟಿತ ಎಂ.ಫಿಲ್. ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೧೫. ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಕಲೆ — ಕಾಂತರಾಜು ಸಿ.ಎಸ್,
ಅಪ್ರಕಟಿತ ಎಂ.ಫಿಲ್. ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೧೬. ಚಾತುರ್ವರ್ಣ ಧರ್ಮ ದರ್ಶನ : ದಶಾವತಾರಗಳು, — ಶ್ರೀಕುಮಾರ ಕರಯ್ಯ
ಪ್ರ: ಮೋಳ ಲೋಹಿಯಾ ಪ್ರಕಾಶನ
ಬಳ್ಳಾರಿ, ೧೯೯೨.

೧೭. ವರ್ಣ ಸಂಜಯ — ಡಾ. ಎಸ್.ಸಿ.ಪಾಟೀಲ
ಪ್ರ: ವಿಜಯ ಲಲಿತಕಲಾ ಮಹಾವಿದ್ಯಾಲಯ
ಇಲಕಲ್, ೨೦೦೧.

೧೮. ವಿಜಯನಗರದ ಭಿತ್ತಿ ಚಿತ್ರಕಲೆ ಒಂದು ಅಧ್ಯಯನ — ಸುಚಿತ್ರಾ ಗ. ಲಿಂಗದಳ್ಳಿ,
ಅಪ್ರಕಟಿತ ಎಂ.ಫಿಲ್. ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೨೦. ಸಂತ ಶುಭರಾಯರ ಜೀವನ ಮತ್ತು ಕಲಾಕೃತಿಗಳು — ಶೈಲಾ ಎಸ್. ಬಡೋಲ್,
ಅಪ್ರಕಟಿತ ಎಂ.ಫಿಲ್. ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೨೧. ದೃಶ್ಯ ಸಂಚಲನ — ಡಾ. ಎಸ್.ಸಿ.ಪಾಟೀಲ
ರಾಷ್ಟ್ರೀಯ ದೃಶ್ಯಕಲಾ ಅಕಾಡೆಮಿ
ಧಾರವಾಡ, ೨೦೧೦.

## English Books


1. A Manual of Tempera Penting — Maxwell Armfield
   Phaidon Press, London, 1930.
2. Arts and Crafts of India and Ceylon — A.K.Kumarswamy
   Oxford University Press, 1913.
3. Ajanta — Bevlasahed Panth
   Bombay, 1982.
4. Art Experience — M. Hiriyanna
   Kavyalaya Publication, Mysore, 1954.
5. Buddist Cave Painting at Tun — Hung Basil
   Cray Feeber and Fabar, Londan, 1959.
6. Convention in the Art of Painting — C. Shivaramamurthy
   Journall of Orental Resrach , Madars
   1934
7. Dance and other Fine Arts in Karnataka — M.S. Choodamani
   Sculputure and Painting
   Mysore University, Mysore, 1985.
8. Pecceani Painting — Mark Zebrowsk
   Roui International, New Delhi, 1983.
9. Painting in Ancient India — Gopinath Rao
   Modern Review, Vol.24, Dec 1918.
10. The Classic Art of Ajantha — Samsarendranatha Gupta
    Modern Review, Vol.24, Dec 1917.

# ಅನುಬಂಧ ೧

## ಸಂಕ್ಷೇಪಗಳು

| | | |
|---|---|---|
| ೧. ಪ್ರ.ಸಂ | : | ಪ್ರಧಾನ ಸಂಪಾದಕರು |
| ೨. ಕ.ವಿ.ವಿ.ಹಂಪಿ | : | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೩. ಕ.ಲ.ಅ.ಬೆ. | : | ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು. |
| ೪. ಮ.ಪ್ರ | : | ಮಹಾಪ್ರಬಂಧ |
| ೫. ಮೈ.ವಿ.ವಿ. | : | ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. |
| ೬. ಗು.ವಿ.ವಿ. | : | ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ |
| ೭. ಸಂ | : | ಸಂಪಾದಕ |
| ೮. ಕಿ.ಪ್ರ | : | ಕಿರುಪ್ರಬಂಧ |
| ೯. ಚಿ.ಸಂ. | : | ಚಿತ್ರಸಂಖ್ಯೆ |
| ೧೦. ಪು.ಸಂ. | : | ಪುಟ ಸಂಖ್ಯೆ |
| ೧೧. ಕು.ವಿ.ವಿ. | : | ಕುವೆಂಪು ವಿಶ್ವವಿದ್ಯಾನಿಲಯ |
| ೧೨. ಚಿ.ಕ.ಪ | : | ಚಿತ್ರಕಲಾ ಪರಿಷತ್ತು |
| ೧೩. ಕ.ಪ್ರ.ಪ್ರಾ.ಬೆಂ | : | ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು |
| ೧೪. ಶಿ.ಚ.ದೇ | : | ಶಿಲ್ಪಚಕ್ರ ದೆಹಲಿ |
| ೧೫. ಪಿ.ಎ.ಜಿ | : | ಪ್ರೋಗ್ರೇಸಿಮ್ ಆರ್ಟ್ ಗ್ರೂಫ್, ಮುಂಬೈ. |

# ಚಿತ್ರಗಳ ನೆಲೆಗಳು

| ಕ್ರ.ಸಂ. | ನೆಲೆ | ಊರು | ತಾಲ್ಲೂಕು | ಜಿಲ್ಲೆ |
|---|---|---|---|---|
| ೧. | ವಿರೂಪಾಕ್ಷೇಶ್ವರ ದೇವಾಲಯ | ಹಂಪಿ | ಹೊಸಪೇಟೆ | ಬಳ್ಳಾರಿ |
| ೨. | ಶ್ರೀರಾಮ ದೇವಾಲಯ | ಬಿ.ಕೆ.ಹಳ್ಳಿ | ಹಳಿಯಾಳ | ಉತ್ತರ ಕನ್ನಡ |
| ೩. | ನಿಪ್ಪಾಣಿಯ ವಾಡೆ | ನಿಪ್ಪಾಣಿ | ನಿಪ್ಪಾಣಿ | ಬೆಳಗಾಂ |
| ೪. | ಪಂಚಗೃಹ ಹಿರೇಮಠ | ಅಮ್ಮಿನಭಾವಿ | ಮುಧೋಳ | ಬಾಗಲಕೋಟ |
| ೫. | ಶ್ರೀರಾಮ ದೇವಾಲಯ | ಹೊನ್ನಾವರ | ಹೊನ್ನಾವರ | ಉತ್ತರ ಕನ್ನಡ |
| ೬. | ಗೋಪಿನಾಥ ವೆಂಕಟರಮಣ ದೇವಾಲಯ | ಹಳದೀಪುರ | ಹೊನ್ನಾವರ | ಉತ್ತರ ಕನ್ನಡ |
| ೭. | ವೆಂಕಟರಮಣ ದೇವಾಲಯ | ಅಘನಾಶಿನಿ | ಕುಮಟಾ | ಉತ್ತರ ಕನ್ನಡ |
| ೮. | ವಿ.ಎಸ್.ಕಾಮತ್ ಅವರ ಮನೆ | ಗೋಕರ್ಣ | ಕುಮಟಾ | ಉತ್ತರ ಕನ್ನಡ |
| ೯. | ಶ್ರೀರಂಗಪಟ್ಟಣ ದೇವಾಲಯ | ಮೈಸೂರು | ಮೈಸೂರು | ದಕ್ಷಿಣ ಕನ್ನಡ |
| ೧೦. | ಚಂದ್ರಮೌಳೇಶ್ವರ ದೇವಾಲಯ | ಶಿಭಿ | ತುಮಕೂರು | ದಕ್ಷಿಣ ಕನ್ನಡ |
| ೧೧. | ಚಂದ್ರಮೌಳೇಶ್ವರ ದೇವಾಲಯ | ಬೆನಕನಕೆರೆ | ತುಮಕೂರು | ದಕ್ಷಿಣ ಕನ್ನಡ |
| ೧೨. | ಶಂಕರೇಶ್ವರ ದೇವಾಲಯ | ಕೆರೆಗೋಡ | ತುಮಕೂರು | ದಕ್ಷಿಣ ಕನ್ನಡ |
| ೧೩. | ರೇವಣಸಿದ್ದೇಶ್ವರಸ್ವಾಮಿ ದೇವಾಲಯ | ಶಿರಾ | ತುಮಕೂರು | ದಕ್ಷಿಣ ಕನ್ನಡ |

# ಅನುಬಂಧ ೨

## ವಕ್ತೃ ವಿವರ

೧. ಅಶೋಕ ಅಕ್ಕಿ : ಹಿರಿಯ ಕಲಾವಿದರು, ಗದಗ

೨. ಎಲ್. ಶಿವಲಿಂಗಪ್ಪ : ಹಿರಿಯ ಕಲಾವಿದರು, ಮೈಸೂರು

೩. ವಿಜಯರಾವ್: ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೪. ಡಾ. ಶಿವಾನಂದ ಬಂಟನೂರು : ಅಧ್ಯಾಪಕರು, ದೃಶ್ಯಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಡಾ. ಮೋಹನರಾವ್ ಪಾಂಚಾಳ : ಅಧ್ಯಾಪಕರು, ದೃಶ್ಯಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಸುಚಿತ್ರಾ ಲಿಂಗದಹಳ್ಳಿ : ಕಿರಿಯ ಸಂಶೋಧಕರು, ದೃಶ್ಯಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಮಲ್ಲಿಕಾರ್ಜುನ ಬಾಗೋಡಿ : ಅಧ್ಯಾಪಕರು, ದೃಶ್ಯಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಕೃಷ್ಣೇಗೌಡ ಎಚ್.ಎನ್. : ತುಮಕೂರು ವಿಶ್ವವಿದ್ಯಾಲಯ, ಚಿತ್ರಕಲಾ ವಿಭಾಗದ ಅಧ್ಯಾಪಕರು

೯. ಕಾಂತರಾಜ ಸಿ.ಎಸ್. : ಕಿರಿಯ ಸಂಶೋಧಕರು, ತುಮಕೂರು.

೧೦. ವಿಶ್ವನಾಥ : ಕಿರಿಯ ಸಂಶೋಧಕರು, ತುಮಕೂರು.

